# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೭
★
ಸಂಚಿಕೆ ೧

ಮಾರ್ಚ್
೧೯೮೬

ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೬೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಯಾವುದೇ ಮಗುವೂ ಪರಿಪೂರ್ಣ ಪಾಲನೆಯಿಂದ ವಂಚಿತರಾಗಬಾರದು. ಆದಕಾರಣ, ಈ ಸಮಗ್ರ ಬಾಲವಿಕಾಸ ಯೋಜನೆ

ಪುಷ್ಟಿಕರ ಆಹಾರ, ಔಷಧೋಪಚಾರ ಹಾಗೂ ಸಾಕ್ಷರತೆ, ಪ್ರತಿ ಮಗುವಿನ ಆಜನ್ಮ ಹಕ್ಕು. ಈ ಪುಟಾಣಿ ಪ್ರಜೆಗಳ ಸರ್ವತೋಮುಖ ಅಭಿವೃದ್ಧಿಗೆಂದು ರಾಜ್ಯ ಸರ್ಕಾರ 6 ವರ್ಷದೊಳಗಿನ ಮಕ್ಕಳಿಗಾಗಿ ಒಂದು ಸಮಗ್ರ ಕಲ್ಯಾಣ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಈ ಕಾರ್ಯಕ್ರಮದಲ್ಲಿ ಲಭಿಸುವ ಸೇವೆಗಳೆಂದರೆ:

**ರೋಗ ನಿರೋಧಕಗಳು :** ಟ್ರಿಪಲ್ ಅಂಟಿಜೆನ್, ಬಿಸಿಜಿ, ಪೋಲಿಯೋ ನಿರೋಧಕ ಚುಚ್ಚುಮದ್ದು ಹಾಗೂ ಇನ್ನಿತರ ರೋಗ ನಿರೋಧಕಗಳನ್ನು ನೀಡುವುದು.

**ಆರೋಗ್ಯ :** ಪ್ರಾಥಮಿಕ ಆರೋಗ್ಯ ಕೇಂದ್ರಗಳ ವೈದ್ಯರ ಮೂಲಕ ವೈದ್ಯಕೀಯ ಸೇವೆ, ಹಾಗೂ ಮಾರ್ಗದರ್ಶನ.

**ಆಹಾರ :** ಅಂಗನವಾಡಿ ಕೇಂದ್ರಗಳ ಮೂಲಕ ಪುಷ್ಟಿದಾಯಕ ಹಾಗೂ ಸಮತೋಲನ ಆಹಾರ ನೀಡುವಿಕೆ.

**ವಿದ್ಯಾಭ್ಯಾಸ :** ಅಂಗನವಾಡಿಗಳಲ್ಲಿ 6 ವರ್ಷದ ಒಳಗಿನ ಮಕ್ಕಳಿಗೆ ಅನೌಪಚಾರಿಕ ವಿದ್ಯಾಭ್ಯಾಸ.

**ಗರ್ಭಿಣಿಯರು ಹಾಗೂ ಬಾಣಂತಿಯರು:** ಶಿಶುಗಳ ಪಾಲನೆಪೋಷಣೆ ಬಗ್ಗೆ ಗರ್ಭಿಣಿಯರು ಹಾಗೂ ಬಾಣಂತಿಯರಿಗೆ ಸೂಕ್ತ ತಿಳುವಳಿಕೆ ನೀಡಿ, ಮಕ್ಕಳ ಯೋಗ್ಯ ಪಾಲನೆ. ಆಹಾರ ಕ್ರಮ ಹಾಗೂ ಸಾಮಾನ್ಯ ಆರೋಗ್ಯ ರಕ್ಷಣೆ ಬಗ್ಗೆ ಮಾರ್ಗದರ್ಶನ.

**ನಿರ್ದೇಶನ ಸೇವೆಗಳು :** ಶಿಶುಗಳ, ಮಾತೆಯರ ಆರೋಗ್ಯ ಸಂಬಂಧವಾದ ಗಂಭೀರ ಪರಿಸ್ಥಿತಿಗಳಲ್ಲಿ ಅವರನ್ನು ಆಸ್ಪತ್ರೆಗಳು ಹಾಗೂ ಇತರ ತಜ್ಞರ ಸಂಸ್ಥೆಗಳಿಗೆ ಸೇರಿಸಿ ಯೋಗ್ಯ ಚಿಕಿತ್ಸೆ ದೊರಕುವಂತೆ ಮಾಡುವುದು.

ಸೂಕ್ತ ತರಬೇತಿ ಪಡೆದ ಅಂಗನವಾಡಿ ಕಾರ್ಯಕರ್ತರುಗಳು ಮತ್ತು ಸಹಾಯಕರಿಂದ ಅಂಗನವಾಡಿ ಕೇಂದ್ರಗಳಲ್ಲಿ ಈ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಬಾಲವಿಕಾಸ ಯೋಜನಾಧಿಕಾರಿಗಳು ಈ ಕೇಂದ್ರಗಳ ಕಾರ್ಯಕ್ಷಮತೆಯ ಮೇಲ್ವಿಚಾರಣೆ ನಡೆಸುವರು.

ಪೂರ್ಣ ವಿವರ ಮತ್ತು ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ:
ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿರುವ ಬ್ಲಾಕ್‌ನ ಬಾಲವಿಕಾಸ ಯೋಜನಾಧಿಕಾರಿಗಳು ಅಥವಾ ಬಿ ಬ್ಲಾಕ್ ಡೆವಲಪ್‌ಮೆಂಟ್ ಆಫೀಸರ್‌ಗಳು.

**ಅಸಹಾಯಕರಿಗೊಂದು ಸಹಾಯದ ಯೋಜನೆ**

—"ಕರ್ನಾಟಕ ವಾರ್ತೆ"

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೭ ಮಾರ್ಚ್ ೧೯೮೬ ಸಂಚಿಕೆ ೧


ಸಂಪಾದಕ

ಎಚ್ಚೆಸ್ಕೆ



ಸಮನ್ವಯ ಸಮಿತಿ : ಆಡಳಿತ ವರ್ಗ

1986-87



ಅಧ್ಯಕ್ಷ

ಮೇ. ಕೃ. ಅನಂತಸ್ವಾಮಿ



ಉಪಾಧ್ಯಕ್ಷರು

ಶಂಕರ ಜಾಲವಾದಿ

ಬೆಂ. ಶ್ರೀ. ರವೀಂದ್ರ



ಪ್ರಧಾನ ಕಾರ್ಯದರ್ಶಿ

ಹಾಗೂ ಪ್ರಕಾಶಕ

ಪಾ. ರಾಜಗೋಪಾಲ



ಉಪ ಪ್ರಧಾನ ಕಾರ್ಯದರ್ಶಿಗಳು

ಟಿ. ಕೆ. ರಂಗನಾಥ

ಚಿ. ರಾ. ವೇಣುಗೋಪಾಲ



ಖಜಾಂಚಿ

ಕ. ನ. ಜಯರಾಮು



ಆಂತರಿಕ ಲೆಕ್ಕ ಪರಿಶೋಧಕ

ಸುದರ್ಶನ



ವಾರ್ಷಿಕ ಚಂದಾ : ರೂ. 12

ಆಜೀವ ಚಂದಾ : ರೂ. 150


## ಲೇಖಕರಿಗೆ ಸೂಚನೆಗಳು

'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟಣೆಗಾಗಿ ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧಿ ವಿಷಯಗಳನ್ನು ಕುರಿತ ಲೇಖನಗಳಿಗೆ ಸ್ವಾಗತವಿದೆ.

ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೇ ಅನುವಾದಗಳಾಗಿರಬಹುದು. ಲೇಖನ ಅನುವಾದವಾಗಿದ್ದರೆ ಮೂಲ ಲೇಖನದ ಶೀರ್ಷಿಕೆ, ಮೂಲ ಲೇಖಕರ ಹೆಸರು ಮತ್ತು ವಿಳಾಸ, ಮೂಲ ಲೇಖನ ಪ್ರಕಟವಾಗಿದ್ದರೆ ಆ ಬಗ್ಗೆ ವಿವರಗಳು ಇವನ್ನೂ, ಅನುವಾದ ಮಾಡಿ ಪ್ರಕಟಿಸಲು ಮೂಲ ಲೇಖಕರ ಅನುಮತಿಯನ್ನೂ ಅನುವಾದದೊಂದಿಗೆ ಕಳುಹಿಸಿಕೊಡಬೇಕು.

ಲೇಖಕರು ಲೇಖನವನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಫುಟವಾಗಿ ಬರೆದಿರಬೇಕು. ಪುಟದ ಎಡಬದಿಯಲ್ಲಿ ಸಾಕಷ್ಟು ಅಂಚು ಬಿಟ್ಟಿರಬೇಕು. ಒಂದು ಸಾಲಿಗೂ ಇನ್ನೊಂದು ಸಾಲಿಗೂ ನಡುವೆ ಧಾರಾಳವಾಗಿ ಸ್ಥಳ ಬಿಟ್ಟಿರಬೇಕು.

ಲೇಖಕರು ತಮ್ಮ ಹೆಸರು ವಿಳಾಸಗಳನ್ನೂ ತಮ್ಮ ಸಂಕ್ಷಿಪ್ತ ಪರಿಚಯವನ್ನೂ ಲೇಖನದೊಂದಿಗೆ ಕಳುಹಿಸಿಕೊಡಬೇಕು. ಈ ವಿವರಗಳಿಲ್ಲದ ಲೇಖನಗಳನ್ನು ಪ್ರಕಟಿಸಲಾಗುವುದಿಲ್ಲ.

ಲೇಖನವನ್ನು ಪ್ರಕಟಿಸುವ ಅಥವಾ ಬಿಡುವ, ಯುಕ್ತವೆನಿಸಿದ ಮಾರ್ಪಾಟು ಮಾಡಿ ಪ್ರಕಟಿಸುವ ಅಧಿಕಾರ ಸಂಪಾದಕರಿಗುಂಟು.

ಪ್ರಕಟವಾಗದ ಲೇಖನಗಳನ್ನು ಹಿಂದಿರುಗಿಸಲು ವ್ಯವಸ್ಥೆಯಿಲ್ಲ. ಲೇಖಕರು ಪ್ರಕಟಣೆಗಾಗಿ ಕಳುಹಿಸುವ ಲೇಖನದ ಪ್ರತಿಯೊಂದನ್ನು ತಮ್ಮ ಬಳಿ ಇಟ್ಟುಕೊಳ್ಳುವುದು ಒಳ್ಳೆಯದು.

ಬ್ಯಾಂಕಿಂಗ್ ಪ್ರಪಂಚದಲ್ಲಿ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ಅದರ ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕು.

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ಅಭಿಪ್ರಾಯಗಳನ್ನು ಪ್ರಕಟಣೆಗಾಗಿ ಬರೆದು ಕಳುಹಿಸಬಹುದು. ಇವು ಸಣ್ಣವಾಗಿರಬೇಕು. ಅಭಿಪ್ರಾಯಗಳೊಂದಿಗೆ ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಬರೆದಿರಬೇಕು.

ಈ ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯಗಳು ಆಯಾ ಲೇಖಕರವು. ಇವನ್ನು ಸಂಪಾದಕರಾಗಲಿ ಪ್ರಕಾಶಕರಾಗಲಿ ಒಪ್ಪಿರುತ್ತಾರೆ ಎಂದೇನೂ ಅಲ್ಲ.

# ನಮೂನೆ IV

(ನಿಯಮ 8ನ್ನು ನೋಡಿ)

| | | | |
|---|---|---|---|
| 1 | ಪ್ರಕಟನೆಯ ಸ್ಥಳ | : | ಬೆಂಗಳೂರು 560 002 |
| 2 | ನಿಯತಕಾಲಿಕದ ಅವಧಿ | : | ತ್ರೈಮಾಸಿಕ |
| 3 | ಮುದ್ರಕರ ಹೆಸರು | : | ಶ್ರೀ ಜಿ. ಎಚ್. ಕೃಷ್ಣಮೂರ್ತಿ |
| | ರಾಷ್ಟ್ರಿಕತೆ | : | ಭಾರತೀಯ |
| | ವಿಳಾಸ | : | ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್<br>ಗಡಿಯಾರ ಗೋಪುರ ಚೌಕ<br>ಮೈಸೂರು 570 001 |
| 4 | ಪ್ರಕಾಶಕರ ಹೆಸರು | : | ಶ್ರೀ ಪಾ. ರಾಜಗೋಪಾಲ |
| | ರಾಷ್ಟ್ರಿಕತೆ | : | ಭಾರತೀಯ |
| | ವಿಳಾಸ | : | ಪ್ರಧಾನ ಕಾರ್ಯದರ್ಶಿ<br>ಸಮನ್ವಯ ಸಮಿತಿ (ನೋಂ)<br>ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು<br>22, ಜಯಚಾಮರಾಜ ರಸ್ತೆ<br>ಬೆಂಗಳೂರು 560 002 |
| 5 | ಸಂಪಾದಕರ ಹೆಸರು | : | ಶ್ರೀ ಎಚ್ಚೆಸ್ಕೆ<br>(ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್) |
| | ರಾಷ್ಟ್ರಿಕತೆ | : | ಭಾರತೀಯ |
| | ವಿಳಾಸ | : | 41 ಆರನೆಯ ಮುಖ್ಯ ರಸ್ತೆ,<br>ಸರಸ್ವತೀಪುರ, ಮೈಸೂರು 570 009 |
| 6 | ಒಟ್ಟು ಬಂಡವಾಳದ ಶೇ. 1ಕ್ಕಿಂತ ಹೆಚ್ಚಿನ ಭಾಗ ಹೊಂದಿರುವ ಷೇರುದಾರರು ಅಥವಾ ಪಾಲುದಾರರು ಹಾಗೂ ಪತ್ರಿಕೆಯ ಒಡೆತನ ಹೊಂದಿರುವವರ ಹೆಸರು ವಿಳಾಸಗಳು | : | ಸಮನ್ವಯ ಸಮಿತಿ (ನೋಂ)<br>ಆಶ್ರಯ: ಭಾರತೀಯ ಸ್ಟೇಟ್ ಬ್ಯಾಂಕ್<br>ಬೆಂಗಳೂರು ನಗರ ಶಾಖೆ<br>22 ಜಯಚಾಮರಾಜ ರಸ್ತೆ, ಬೆಂಗಳೂರು 560 002 |

ನಾನು, ಪಾ. ರಾಜಗೋಪಾಲ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದವೆಂದು ಈ ಮೂಲಕ ಘೋಷಿಸುತ್ತೇನೆ.

**ಪಾ. ರಾಜಗೋಪಾಲ**
ಪ್ರಕಾಶಕ

# ಸಂಪಾದಕೀಯ

## ತ್ರೈಮಾಸಿಕ

ಇದುವರೆಗೂ ಅರ್ಧವಾರ್ಷಿಕವಾಗಿದ್ದ 'ಬ್ಯಾಂಕಿಂಗ್ ಪ್ರಪಂಚ' ಈ ಸಂಚಿಕೆಯಿಂದ ತ್ರೈಮಾಸಿಕವಾಗಿದೆ. ಆರು ವರ್ಷಗಳ ಹಿಂದೆ ಇದನ್ನು ಆರಂಭಿಸಿದಾಗ ಇದು ತ್ರೈಮಾಸಿಕವಾಗಿರಬೇಕೆಂಬುದೇ ಅನೇಕರ ಆಸೆಯಾಗಿತ್ತು. ಆದರೆ ಇಂಥ ಪತ್ರಿಕೆಯೊಂದಕ್ಕೆ ಕನ್ನಡಿಗರಿಂದ ಎಷ್ಟರ ಮಟ್ಟಿಗಿನ ಸ್ವಾಗತ ಪ್ರೋತ್ಸಾಹ ದೊರಕಿಯಾವೋ, ಹಣ ಬ್ಯಾಂಕಿಂಗ್ ವಿಚಾರಗಳನ್ನು ಕುರಿತು ಲೇಖನ ಬರೆಯಬಲ್ಲವರು ಹೆಚ್ಚಿನ ಸಂಖ್ಯೆಯಲ್ಲಿ ದೊರಕಿಯಾರೋ ಇಲ್ಲವೋ ಎಂದೇ ನಮ್ಮ ಚಿಂತೆಯಾಗಿತ್ತು. ಪತ್ರಿಕೆಯನ್ನು ಕೇವಲ ಹಣ-ಬ್ಯಾಂಕಿಂಗ್ ವಿಚಾರಗಳಿಗೆ ಸೀಮಿತಗೊಳಿಸುವುದು ಸರಿಯಲ್ಲ ಎಂದು ಕೂಡ ಹಲವರು ಅಭಿಪ್ರಾಯಪಟ್ಟರು. ಈ ವಿಚಾರಗಳನ್ನು ಕುರಿತು ಎಷ್ಟು ಲೇಖನ ಬರೆಯುವುದು ಸಾಧ್ಯ? ಸ್ವಲ್ಪ ಕಾಲದ ಅನಂತರ ಲೇಖನಗಳಿಗೆ ವಿಷಯಗಳೇ ಇಲ್ಲದಂಥ ಸ್ಥಿತಿ ಬಂದೀತು. ಆದ್ದರಿಂದ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಯಾವುದೇ ವಿಷಯವನ್ನು ಕುರಿತ ಲೇಖನವಿದ್ದರೂ ಅದಕ್ಕೆ ಪತ್ರಿಕೆಯಲ್ಲಿ ಅವಕಾಶ ಇರಬೇಕು ಎಂಬುದು ಇವರ ಸಲಹೆಯಾಗಿತ್ತು. ಒಂದು ದೃಷ್ಟಿಯಲ್ಲಿ ಬ್ಯಾಂಕಿಂಗಿಗೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸಂಬಂಧಿಸದ ಆರ್ಥಿಕ ವಿಷಯವೇ ಇಲ್ಲವೆಂಬುದು ನಿಜವಾದರೂ, ಬ್ಯಾಂಕಿಂಗಿಗೆ ನೇರವಾಗಿ ಸಂಬಂಧಿಸುವ ವಿಚಾರಗಳಿಗಷ್ಟೇ ಪತ್ರಿಕೆ ಸೀಮಿತವಾಗಿರಬೇಕು ಎಂದು ತೀರ್ಮಾನಿಸಲಾಯಿತು. ಪತ್ರಿಕೆಗೆ 'ಬ್ಯಾಂಕಿಂಗ್ ಪ್ರಂಪಂಚ' ಎಂದು ಹೆಸರಿಟ್ಟ ಮೇಲೆ, ಅದರಲ್ಲಿ ಇತರ ವಿಷಯಗಳನ್ನೂ ಕುರಿತ ಲೇಖನಗಳನ್ನು ಪ್ರಕಟಿಸುವುದು ಎಷ್ಟರ ಮಟ್ಟಿಗೆ ಉಚಿತ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಹೀಗೆಂದರೆ ಇತರ ಆರ್ಥಿಕ ವಿಚಾರಗಳಿಗೆ ಈ ಪತ್ರಿಕೆಯಲ್ಲಿ ಎಡೆಯಿರಲೇಬಾರದೆಂದೇನೂ ಅಲ್ಲ.ಬ್ಯಾಂಕಿಂಗ್ ಅಥವಾ ಹಣದ ಮೇಲೆ ತೀವ್ರ ಪರಿಣಾಮ ಬೀರುವಂಥ ಯಾವುದೇ ಅಸಾಧಾರಣ ಘಟನೆ ಅಥವಾ ವಿದ್ಯಮಾನಕ್ಕೆ ಪತ್ರಿಕೆ ಕಣ್ಣುಮುಚ್ಚಲಾರದು. ಅಲ್ಲದೆ ಹಣ ಮತ್ತು ಬ್ಯಾಂಕಿಂಗ್ ಕಿರಿದಾದ ಕ್ಷೇತ್ರವೇನೂ ಅಲ್ಲ. 'ಬ್ಯಾಂಕಿಂಗ್ ಪ್ರಪಂಚ' ಒಂದಕ್ಕೇ ಅಲ್ಲ, ಇಂಥ ಹತ್ತು ಪತ್ರಿಕೆಗಳಿಗೆ ಆಗಿ ಮಿಗುವಷ್ಟು ಲೇಖನಗಳಿಗೆ ಅದು ಸಾಮಗ್ರಿ ಒದಗಿಸಬಲ್ಲುದು. ಹೀಗಿರುವಾಗ ಯಾವ ದೃಷ್ಟಿಯಿಂದಲೂ 'ಬ್ಯಾಂಕಿಂಗ್ ಪ್ರಪಂಚ' ಸೊರಗಬೇಕಾಗುವುದಿಲ್ಲ, ಬರಡಾಗಬೇಕಾದ್ದಿಲ್ಲ ಎಂಬುದು ನಮ್ಮ ಅನಿಸಿಕೆ.

ನಮ್ಮ ಅನಿಸಿಕೆ ಸುಳ್ಳಾಗಲಿಲ್ಲ. ಈ ಆರು ವರ್ಷಗಳಲ್ಲಿ 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಈ ಕ್ಷೇತ್ರದ ಅನೇಕ ಮುಖಗಳ ಪರಿಚಯ ಮಾಡಿಕೊಡಲು ಯತ್ನಿಸಲಾಗಿದೆ. ವಿಷಯಗಳಿಗೇನೂ ಕೊರತೆಯಿಲ್ಲ. ಇವನ್ನು ಕುರಿತು ಬರೆಯಬಲ್ಲ ಸಮರ್ಥರು ಎಷ್ಟು ಮಂದಿ ಇದ್ದಾರು ಎಂಬ ಪ್ರಶ್ನೆಗೂ ಪತ್ರಿಕೆ ಉತ್ತರ ನೀಡಿದೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಿರತರಾದ, ಇದರಲ್ಲಿ ಆಸಕ್ತರಾದ ಅನೇಕ ತರುಣ ಲೇಖಕರ ಪ್ರತಿಭೆ ಈ ಪತ್ರಿಕೆಯಿಂದಾಗಿ ತೆರೆದುಕೊಂಡಿದೆ, ವಿಕಾಸಗೊಂಡಿದೆ, ಪ್ರಕಾಶಕ್ಕೆ ಬಂದಿದೆ. ಪತ್ರಿಕೆಯ ಪ್ರಕಟನೆಯ ಆರು ತಿಂಗಳುಗಳ ಅವಧಿ ತೀರ ನಿಡಿದು ಎನಿಸಿದೆ. ಒಂದು ಸಂಚಿಕೆ ಪ್ರಕಟವಾದ ಮೇಲೆ ಇನ್ನೊಂದು ಸಂಚಿಕೆ ಹೊರಬೀಳುವವರೆಗೆ ಇಂಥದೊಂದು ಪತ್ರಿಕೆ ಇದೆಯೆಂಬುದನ್ನೇ ಓದುಗರು ಮರೆತುಬಿಡುವ ಸಂಭವವುಂಟು. Out of sight, out of mind. ಕಂಡಾಗಷ್ಟೇ ನೆನಪು, ಕಾಣದಾಗ ಮರೆವು ಇಂಥ ವೈಚಾರಿಕ ಪತ್ರಿಕೆಯೊಂದು ಕನ್ನಡದಲ್ಲಿ ನಮ್ಮ ಆಲೋಚನೆಯ ಒಂದು ಅವಿಭಾಜ್ಯ ಅಂಗವಾಗಿ ಪರಿಣಮಿಸುವಂಥ ವಾತಾವರಣ ನಾಡಿನಲ್ಲಿ ಇನ್ನೂ ಸೃಷ್ಟಿಯಾಗಿಲ್ಲ. 'ಕೊರವಂಜಿ'ಯಂಥ ಜನಪ್ರಿಯ ಹಾಸ್ಯ ಪತ್ರಿಕೆಯೇ ನಿಂತುಹೋಗಬೇಕಾಗಿ ಬಂದಾಗ, ಅದರ ಸಂಪಾದಕರಾಗಿದ್ದ 'ರಾಶಿ' ಅವರು ಬರೆದ ಒಂದು ಮಾತು ನೆನಪಾಗುತ್ತದೆ: 'ಹೋಗಿ ಬರುತ್ತೇನೆ ಎಂದೆಯಾ? ನೀನಿದ್ದೀಯೆಂಬುದೇ ಗೊತ್ತಿರಲಿಲ್ಲವಲ್ಲ!' ಎಂಬುದು ಕೊರವಂಜಿಯ ನಿರ್ಗಮನದ ಸಂದರ್ಭದಲ್ಲಿ ಕನ್ನಡಿಗರ ಪ್ರತಿಕ್ರಿಯೆ. ಆದರೆ ಹಾಗೆಂದುಕೊಂಡು ನಾವಂತೂ ನಿರಾಸಕ್ತಿಯ ಧೋರಣೆ ತಳೆಯಲು ಸಿದ್ಧರಿಲ್ಲ. ಕನ್ನಡ ಓದುಗರ ಮನಸ್ಸುಗಳಿಗೆ ಲಗ್ಗೆ ಹಾಕುವುದೇ ನಮ್ಮ ಸಂಕಲ್ಪ. ಆರು ತಿಂಗಳ ಅವಧಿ ತುಂಬ ನಿಡಿದಾದರೆ ಮೂರು ತಿಂಗಳಿಗೊಮ್ಮೆ ಪ್ರಕಟಿಸುವ ಹಠ. ತ್ರೈಮಾಸಿಕವಾಗಿರುವುದರಿಂದ ಕೆಲವು ಅನುಕೂಲಗಳುಂಟು. ಓದುಗರ ನೆನಪಿನ ತೆರೆಯ ಮೇಲಿಂದ ದೀರ್ಘಕಾಲ ಮರೆಯಾಗದಿರುವುದೊಂದೇ ಅನುಕೂಲವಲ್ಲ. ಕ್ರಮೇಣ ಪತ್ರಿಕೆಯ ಪುಟಗಳನ್ನು ಹೆಚ್ಚಿಸಿ, ಹೆಚ್ಚುಹೆಚ್ಚು ಲೇಖಕರಿಗೆ ಅವಕಾಶಮಾಡಿಕೊಡುವುದು ಸಾಧ್ಯವಾಗುತ್ತದೆ. ಆರು ತಿಂಗಳ ಅವಧಿಯಲ್ಲಿ ಪ್ರಕಟವಾಗುವ ಕೆಲವು ಲೇಖನಗಳು ಬೆಳಕು ಕಾಣುವ ವೇಳೆಗೆ ಹಳತಾಗುವ ಸಂಭವವಿತ್ತು. ಲೇಖನಗಳನ್ನು ಬರೆದಂದಿನಿಂದ ಅವು ಪ್ರಕಟವಾಗುವ ವೇಳೆಗೆ ಆ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಬೆಳವಣಿಗೆಗಳೊ ಬದಲಾವಣೆಗಳೂ ಆಗುವುದು ಸಾಧ್ಯವಿತ್ತು. ಹಣ ಹಾಗೂ ಬ್ಯಾಂಕಿಂಗ್ ಸದಾ ತಳಮಳಿಸುವ ಕ್ಷೇತ್ರ, ಸದಾ ಪರಿವರ್ತನಶೀಲವಾದ ಕ್ಷೇತ್ರ. ಪತ್ರಿಕೆಯನ್ನು ತ್ರೈಮಾಸಿಕವಾಗಿ ಮಾಡಿರುವುದರಿಂದ ಲೇಖನದ ಬರವಣಿಗೆಯ ಕಾಲಕ್ಕೂ ಅದರ ಪ್ರಕಟನೆಯ ಕಾಲಕ್ಕೂ ಅಂತರ ಕಡಿಮೆಯಾಗುತ್ತದೆ. ಸಂಪಾದಕೀಯ ಬರಹವೂ ಸಂಚಿಕೆಯ ಪ್ರಕಟನೆಯ ದಿನಕ್ಕೆ ಹೆಚ್ಚು ಹತ್ತಿರದ್ದಾಗಿರುವುದು ಸಾಧ್ಯ.

ಆದರೆ ಬದಲಾವಣೆಯಿಂದ ಪತ್ರಿಕೆಯ ಆರ್ಥಿಕ ತೊಂದರೆಗಳು ಅಧಿಕವಾಗುವುವೆಂಬುದನ್ನೂ ನಾವು ಮರೆತಿಲ್ಲ. 'ಬ್ಯಾಂಕಿಂಗ್ ಪ್ರಪಂಚ' ವಾಣಿಜ್ಯೋದ್ದೇಶದ ಪ್ರಕಟನೆಯಲ್ಲ, ಪತ್ರಿಕೆಯ ಲೇಖಕರೂ ಸಂಪಾದಕರೂ ಪ್ರಕಾಶಕರೂ ಕೇವಲ ಕನ್ನಡದ ಹಾಗೂ ಬ್ಯಾಂಕಿಂಗಿನ ಅಭಿಮಾನದಿಂದಾಗಿಯೇ ಈ ಕಾರ್ಯದಲ್ಲಿ ಪ್ರವೃತ್ತರಾಗಿದ್ದಾರೆ. ಆದರೆ 'ಅಭಿಮಾನ' ಎಂಬ ಮಾತನ್ನು ಕೆಲವರಾದರೂ ತಪ್ಪಾಗಿ ಅರ್ಥಮಾಡಿಕೊಳ್ಳುವಸಾಧ್ಯತೆಯುಂಟು.'ಒಂದು ಮಾತನ್ನು ಲೋಕ ಹೊಲಗೆಡಿಸಿಕೊಂಡಿಹುದು' ಎನ್ನುತ್ತಾನೆ, ಪೆಲಿ (ಅನುವಾದ: 'ಶ್ರೀ'). 'ಒಂದು ಭಾವದ ಹೃದಯವರಿಯದೆಯೆ ಜರೆಯುವುದು, ಜರೆಯಬೇಡದನು ನೀನು' ಎಂಬುದು ಕವಿಯ ಹಾರೈಕೆ. ಕನ್ನಡದ ಅಭಿಮಾನವೆಂದರೆ ದುರಭಿಮಾನವೆಂದೇ ಅನೇಕರ ಭಾವನೆ. ಆದರೆ 'ಬ್ಯಾಂಕಿಂಗ್ ಪ್ರಪಂಚ'ದಂಥ ಪತ್ರಿಕೆಯೊಂದು ಭಾರತದ ಬೇರಾವ ಭಾಷೆಯಲ್ಲೂ (ಇಂಗ್ಲಿಷ್ ವಿನಾ) ಇಲ್ಲವೆಂಬುದು ನಮ್ಮ ತಿಳಿವಳಿಕೆ. ಹಣ ಮತ್ತು ಬ್ಯಾಂಕಿಂಗ್ ಕುರಿತ ಸಂಕೀರ್ಣ ವಿಚಾರಗಳನ್ನು ಕೂಡ ಕನ್ನಡದಲ್ಲಿ ಚಿಂತಿಸುವ, ಚರ್ಚಿಸುವ, ಅಭಿವ್ಯಕ್ತಿಸುವ ಸಾಮರ್ಥ್ಯ ದೊರಕಿಸಿಕೊಡಲು 'ಬ್ಯಾಂಕಿಂಗ್ ಪ್ರಪಂಚ' ಶ್ರಮಿಸುತ್ತಿದೆ, ಬಹುಮಟ್ಟಿಗೆ ಯಶಸ್ವಿಯಾಗಿದೆ ಎಂಬುದು ಎಲ್ಲ ಕನ್ನಡಿಗರೂ ಅಭಿಮಾನಪಡಬೇಕಾದ ಸಂಗತಿ. ಆದರೆ ನಮ್ಮ ಅನೇಕ ದಾರಿದ್ರ್ಯಗಳ ಪೈಕಿ ಅಭಿಮಾನದಾರಿದ್ರ್ಯವೂ ಒಂದು, ಬೇರೆ ಭಾಷೆಯೊಂದರಲ್ಲಿ ಇಂಥ

ಕೆಲಸವೊಂದು ನಡೆದಿದ್ದರೆ ಅಲ್ಲಿಯ ಜನ ಅದನ್ನು ಮಾಳಿಗೆಯ ಮೇಲಿಂದ ಸಾರಿಕೊಳ್ಳುತ್ತಿದ್ದರು. ಹೀಗೆಂದರೆ ಇದಕ್ಕೆ ಪ್ರಚಾರವನ್ನು ಬಯಸಿ ನಾವು ಈ ಮಾತು ಹೇಳುತ್ತಿಲ್ಲ. ಬೇಕಾದ್ದು, ಇಂಥದೊಂದು ಕೆಲಸ ಆಗುತ್ತಿದೆಯೆಂಬುದನ್ನು ಕಾಣುವ ಔದಾರ್ಯ, ಈ ಕೆಲಸದ ಫಲ ಪಡೆದುಕೊಳ್ಳುವ ಜಾಣತನ, ವಿವೇಕ. 'ಎನಿತನೊರಲ್ದು ಪೇಳ್ವ ಕವಿಯೇವನ್? ಅದನ್ ಮೆಚ್ಚಬಲ್ಲವರನ್ ಅರಸಲ್ಕೆವೇಳ್ಪುದು, ಕಟ್ಟಿಯುಮೇನೊ, ಮಾಲೆಗಾರನ ಪೊಸ ಬಾಸಿಗಂ ಮುಡಿವ ಭೋಗಿಳಿಲ್ಲದಿದ್ದೊಡೆ ಬಾಡಿಪೋಗದೇ?' ಎನ್ನುತ್ತಾನೆ ಕವಿ ಜನ್ನ. ಈ ಮಾತು ಕಾವ್ಯಕ್ಕೆ ಮಾತ್ರ ಸಲ್ಲುವುದಲ್ಲ, ಎಲ್ಲ ಬರವಣಿಗೆಗೂ ಸಲ್ಲುವಂಥದು. ಕನ್ನಡದಲ್ಲಿ ಆಗುತ್ತಿರುವ ಈ ಕೆಲಸವನ್ನು ಕಂಡು ಮೆಚ್ಚಿ ಇದರ ಪ್ರಯೋಜನ ಪಡೆದುಕೊಳ್ಳುವ ಜನರ ಸಂಖ್ಯೆ ಹೆಚ್ಚುವ ಕಾಲವನ್ನು ಎದುರುನೋಡುತ್ತಾ ಪ್ರಯತ್ನ ಮುಂದುವರಿಸುವ ಸಂಕಲ್ಪನಮ್ಮದು. 'ಬ್ಯಾಂಕಿಂಗ್ ಪ್ರಪಂಚ' ತ್ರೈಮಾಸಿಕವಾಗಿರುವುದರಿಂದಲೂ, ಕಾಗದ ಮುದ್ರಣ ವೆಚ್ಚ ಅಧಿಕವಾಗಿರುವುದರಿಂದಲೂ ಪತ್ರಿಕೆಯ ವಾರ್ಷಿಕ ಹಾಗೂ ಆಜೀವ ಚಂದಾ ದರಗಳನ್ನು ಏರಿಸುವುದು ಅನಿವಾರ್ಯವಾಗಿದೆ. ಪತ್ರಿಕೆಯನ್ನು ಉದ್ದಕ್ಕೂ ತಮ್ಮದೆಂದು ಪೋಷಿಸುತ್ತ ಬರುತ್ತಿರುವ ಅಭಿಮಾನಿ ಬಳಗದವರು ನಮ್ಮ ಈ ತೀರ್ಮಾನಕ್ಕೆ ಒಪ್ಪಿಗೆ ನೀಡಿ ಮುಂದೆಯೂ ಇದಕ್ಕೆ ಪೋಷಣೆ ನೀಡುವರೆಂದೂ, ತಮ್ಮ ಮಿತ್ರರನ್ನೂ ಪತ್ರಿಕೆಯ ಚಂದಾದಾರರನ್ನಾಗಿ ಮಾಡುವರೆಂದೂ ನಂಬಿದ್ದೇವೆ.

ತ್ರೈಮಾಸಿಕ ಪತ್ರಿಕೆಯಲ್ಲಿ ಇನ್ನೂ ಹೆಚ್ಚು ಉಪಯುಕ್ತವಾದ ಹಾಗೂ ವೈವಿಧ್ಯಪೂರಿತವಾದ ಲೇಖನಗಳನ್ನು ಪ್ರಕಟಿಸುವುದು ನಮ್ಮ ಉದ್ದೇಶ. ಹಣ-ಬ್ಯಾಂಕಿಂಗ್ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಕುರಿತ ವಿದ್ವತ್ಪೂರ್ಣ ಹಾಗೂ ಸಂಶೋಧನಾತ್ಮಕ ಬರಹಗಳ ಜೊತೆಗೆ, ಈ ಕ್ಷೇತ್ರದ ಪರಿಚಯ ಮಾಡಿಕೊಳ್ಳಬಯಸುವವರಿಗಾಗಿ, ಕೆಲವು ಸರಳ ಲೇಖನಗಳನ್ನೂ, ಕನ್ನಡದಲ್ಲಿ ಹಣ-ಬ್ಯಾಂಕಿಂಗ್ ಕುರಿತಂತೆ ಚಿಂತನ, ವ್ಯವಹಾರ, ಅಭಿವ್ಯಕ್ತಿ ಸಾಧ್ಯವಾಗುವಂತೆ ನೆರವಾಗುವ ಲೇಖನಗಳನ್ನೂ ಪ್ರಕಟಿಸಲು ಹೆಚ್ಚು ಹೆಚ್ಚು ಪ್ರಯತ್ನ ನಡೆಸಲಾಗುತ್ತದೆ. ಕನ್ನಡದಲ್ಲಿ ಬ್ಯಾಂಕಿಂಗ್ ವ್ಯವಹಾರವನ್ನು ನಡಸಲು ಇರುವ ಅಥವಾ ಒದಗಿಬರುವ ಅಡ್ಡಿ ಆತಂಕಗಳ ನಿವಾರಣೆ, ವಾಚಕರೊಂದಿಗೆ ಸಂವಾದ, ಚರ್ಚಾವೇದಿಕೆ, ಬ್ಯಾಂಕಿಂಗಿಗೆ ಸಂಬಂಧಿಸಿದಂತೆ ನ್ಯಾಯಾಲಯದ ತೀರ್ಪುಗಳು—ಮುಂತಾದ ನಾನಾ ಅಂಕಣಗಳನ್ನು ಕ್ರಮೇಣ ತೆರೆಯಬೇಕೆಂಬ ಯೋಚನೆಯಿದೆ. ಇವುಗಳ ಯಶಸ್ಸು ಬಹಳ ಮಟ್ಟಿಗೆ ಓದುಗರನ್ನೇ ಅವಲಂಬಿಸಿದೆಯೆಂಬುದು ನಿರ್ವಿವಾದ. ಎರಡು ಕೈ ಸೇರಿದರೆ ಮಾತ್ರವೇ ಚಪ್ಪಾಳೆ. ಒಂದೇ ಕೈಯಿಂದ ಅದು ಸಾಧ್ಯವಾದೀತೆ ?

## 1985ರಲ್ಲಿ ಬ್ಯಾಂಕಿಂಗ್

1985 ಅನೇಕ ದೃಷ್ಟಿಗಳಿಂದ ಗಮನಾರ್ಹವಾದ್ದು. ಇದನ್ನು ಬ್ಯಾಂಕಿಂಗ್ ಬೆಳವಣಿಗೆಯ ಜಲವಿಭಾಗ ರೇಖೆಯ ವರ್ಷ ಎಂದು ಕರೆಯಬಹುದು. ಆರನೆಯ ಪಂಚವಾರ್ಷಿಕ ಯೋಜನೆಯ ಅವಧಿ ಈ ವರ್ಷದ ಮಾರ್ಚ್ ತಿಂಗಳೊಂದಿಗೆ ಕೊನೆಗೊಂಡು, ಏಪ್ರಿಲಿನಲ್ಲಿ ಏಳನೆಯ ಯೋಜನೆ ಆರಂಭವಾಯಿತು. ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣದೊಂದಿಗೆ ಬೃಹತ್ತಾಗಿ ಬೆಳೆಯತೊಡಗಿದ ಬ್ಯಾಂಕಿಂಗ್ ವ್ಯವಸ್ಥೆಯ ಗುಣಾತ್ಮಕ ಅಭಿವರ್ಧನೆಯ ಬಗ್ಗೆ ಆಲೋಚನೆ ತೊಡಗಿದ್ದು 1985ರಲ್ಲಿ. ಬ್ಯಾಂಕ್ ಶಾಖೆಗಳ ಸಂಖ್ಯೆ ಗಮನಾರ್ಹವಾಗಿ ಅಧಿಕವಾಗಿದ್ದಾಗ್ಯೂ, ಅತಿವ್ಯಾಪ್ತಿ-ಅವ್ಯಾಪ್ತಿಗಳ ದೋಷ-ಲೋಪಗಳ ನಿವಾರಣೆ ಅಗತ್ಯವೆಂಬುದು ವಿಶೇಷವಾಗಿ ಮನವರಿಕೆಯಾಗುತ್ತಿರುವುದು ಒಂದು ಶುಭ ಚಿಹ್ನೆ. ಸಾಮಾಜಿಕ ಬ್ಯಾಂಕಿಂಗಿನ ಉದ್ದೇಶ ಸಾರ್ಥಕವಾಗುತ್ತಿದೆಯೇ ಎಂಬುದರ ಕಡೆಗೂ ಆಲೋಚನೆ ಹರಿಯುತ್ತಿದೆ. ಬ್ಯಾಂಕುಗಳ ಉತ್ಪಾದಕತೆ, ಲಾಭಪ್ರದತೆ, ಸೇವೆಯ ಉತ್ತಮಿಕೆ—ಇವು ಕಡೆಗಣಿಸುವಂಥ ಅಂಶಗಳೇನಲ್ಲ. ಬ್ಯಾಂಕುಗಳು ನೀಡುತ್ತಿರುವ ಸೇವೆಗೆ ಪ್ರತಿಯಾಗಿ ವಿಧಿಸಲಾಗುತ್ತಿದ್ದ ಶುಲ್ಕದ ಪುನರ್ವಿಮರ್ಶೆಯಾದ್ದೂ ಕಳೆದ ವರ್ಷದ ಒಂದು ಮುಖ್ಯ ಘಟನೆ. ಗ್ರಾಹಕ ಸೇವೆಯ ವಿಚಾರವೂ ವಿಶೇಷವಾಗಿ ಚರ್ಚೆಗೆ ಒಳಪಡುತ್ತಿರುವ ಸಂಗತಿ.

1984ಕ್ಕೆ ಹೋಲಿಸಿದರೆ 1985ರಲ್ಲಿ ಬ್ಯಾಂಕ್ ಠೇವಣಿಗಳ ಬೆಳವಣಿಗೆಯ ದರ ಗಮನಾರ್ಹವಾಗಿ ಏರಲಿಲ್ಲವಾದಾಗ್ಯೂ, ಠೇವಣಿಗಳ ಬೆಳವಣಿಗೆಯ ಮೊತ್ತವನ್ನು ಪರಿಗಣಿಸಿದಾಗ ಅದು ಹಿಂದಿನ ವರ್ಷದ್ದಕ್ಕಿಂತ ಸುಮಾರು ಎರಡು ಸಾವಿರ ಕೋಟಿ ರೂಪಾಯಿಗಳಿಗಿಂತ ಅಧಿಕವಾಗಿತ್ತು. ಹಿಂದಿನ ವರ್ಷ ಪರಿಬದ್ಧಿಸಲಾಗಿದ್ದು ಬಿಡುಗಡೆ ಮಾಡಲಾದ ಹಣವನ್ನೂ ಸೇರಿಸಿದರೆ ಬ್ಯಾಂಕುಗಳ ವಶದಲ್ಲಿದ್ದ, ಸಾಲ ನೀಡಲು ಒದಗಿಬಂದಿದ್ದ ಹಣ ಕಡಿಮೆಯೇನಲ್ಲ. ಪರಿನಿಯತ ದ್ರವತ್ವ ಅನುಪಾತವನ್ನು ಏರಿಸಲಾಗಿದ್ದರೂ ಬ್ಯಾಂಕುಗಳ ಬಳಿ ಹಣ ಧಂಡಿಯಾಗಿತ್ತು. ಬ್ಯಾಂಕ್ ಮುಂಗಡಗಳ ಬೆಳವಣಿಗೆಯ ದರ ಹಿಂದಿನ ವರ್ಷದ್ದಕ್ಕಿಂತ ಕಡಿಮೆಯೇ. ಆಹಾರ ಹಾಗೂ ಆಹಾರೇತರ ಮುಂಗಡಗಳೆರಡರ ಬೆಳವಣಿಗೆ ದರಗಳೂ ಕಡಿಮೆಯಾಗಿದ್ದುವು. ಆಹಾರ ಧಾನ್ಯದ ಮೇಲೆ ನೀಡಿದ ಮುಂಗಡದ ಮೇಲಣ ಬಡ್ಡಿದರವನ್ನು ಏರಿಸಿದ್ದರಿಂದ ಆಹಾರ ನಿಗಮ ಸಂಯಮದಿಂದ ವರ್ತಿಸುವುದು ಅಗತ್ಯವಾಯಿತು. ಆಹಾರೇತರ ಸರಕುಗಳಿಗೆ ಬ್ಯಾಂಕುಗಳ ಮುಂಗಡ ಅಧಿಕವಾಗಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ಆದ್ಯತಾವಲಯಗಳಿಗೆ ನೀಡಿದ ಮುಂಗಡದಲ್ಲೂ ಏರಿಕೆಯಾಗಲಿಲ್ಲ. ಬ್ಯಾಂಕುಗಳ ಒಟ್ಟು ಮುಂಗಡಗಳಲ್ಲಿ ಆದ್ಯತಾವಲಯಕ್ಕೆ ಮುಂಗಡ ಶೇ. 40ರಷ್ಟಿರಬೇಕೆಂಬ ಗುರಿಯನ್ನು ಆಗಲೇ ಮುಟ್ಟಿ ಆಗಿತ್ತು. ಹತ್ತಿ, ಸಣಬು, ರಸಗೊಬ್ಬರ ಇವಕ್ಕೆ ಮುಂಗಡಗಳು ಏರಿದುವು. ಇವು ಇಲ್ಲದಿದ್ದರೆ ಬ್ಯಾಂಕ್ ನಿಧಿಗಳು ವಿನಿಯೋಜನೆಯಾಗದೆ ಇನ್ನೂ ಹೆಚ್ಚಾಗಿ ಉಳಿದುಬಿಡುತ್ತಿದ್ದುವು. ಮೋಟಾರು ವಾಹನವೇ ಮುಂತಾದ ಕೆಲವು ಕೈಗಾರಿಕೆಗಳ ಹಿಂಜರಿತದಿಂದಾಗಿಯೂ ಬ್ಯಾಂಕ್ ಮುಂಗಡಗಳ ವಿನಿಯೋಜನೆ ಕುಂಠಿತವಾಯಿತು. ಅನೇಕ ಕಂಪನಿಗಳು ನೇರವಾಗಿ ಪರಿವರ್ತನೀಯ ಬಾಂಡುಗಳನ್ನೂ ಡಿಬೆಂಚರುಗಳನ್ನೂ ಸಾರ್ವಜನಿಕರಿಗೆ ನೀಡಿ ಹಣ ಎತ್ತತೊಡಗಿವೆ. ಇದರಿಂದಾಗಿಯೂ ಬ್ಯಾಂಕ್ ಮುಂಗಡಗಳ ಮೇಲೆ ಪರಿಣಾಮವಾಗಿದೆಯೆನ್ನಬೇಕು. ಸರ್ಕಾರಿವಲಯ ಕಂಪನಿಗಳೂ ಬಾಂಡು ನೀಡತೊಡಗಿರುವುದು ಇನ್ನೊಂದು ಪ್ರಮುಖ ಬೆಳವಣಿಗೆ. ಕಳೆದ ವರ್ಷ ಕೈಗಾರಿಕಾ ಉತ್ಪಾದನೆಯ ಬೆಳವಣಿಗೆಯ ದರವೂ ಗಮನಾರ್ಹವಾಗಿ ಏರಲಿಲ್ಲ. ಹೊಸದಾಗಿ ಕೈಗಾರಿಕೆಗಳಲ್ಲಿ ಮಾಡಲಾದ ವಿನಿಯೋಜನೆಗಳಿಂದ ಈ ವರ್ಷ ಹಾಗೂ ಮುಂದಿನ ವರ್ಷಗಳಲ್ಲಿ ಉತ್ಪಾದನೆ ಅಧಿಕವಾದರೆ, ಅದಕ್ಕೆ ತಕ್ಕಂತೆ ಬೇಡಿಕೆಯೂ ಏರಿದರೆ, ಬ್ಯಾಂಕ್ ಮುಂಗಡಗಳಿಗೆ ಹೆಚ್ಚಿನ ಬೇಡಿಕೆ ಬರಬಹುದು. ಅಂತೂ ಬ್ಯಾಂಕುಗಳು ಠೇವಣಿ ಸಂಗ್ರಹಣೆ ಹಾಗೂ ಮುಂಗಡ ನೀಡಿಕೆಯ ವಿಚಾರದಲ್ಲಿ ಎದುರಿಸುತ್ತಿರುವ ತೀವ್ರ ಸ್ಪರ್ಧೆಯನ್ನು ಗಂಭೀರವಾಗಿ ಪರಿಗಣಿಸುವ ಕಾಲವೀಗ ಬಂದಿದೆ.

## ರಿಸರ್ವ್ ಬ್ಯಾಂಕ್ ವರದಿ

ಭಾರತದಲ್ಲಿ 1984-85ರ (ಜುಲೈ-ಜೂನ್) ಬ್ಯಾಂಕಿಂಗ್ ಪ್ರವೃತ್ತಿ-ಪ್ರಗತಿಗಳನ್ನು ಕುರಿತಂತೆ ರಿಸರ್ವ್ ಬ್ಯಾಂಕ್ ನೀಡಿರುವ ವರದಿಯಲ್ಲಿ ನಮ್ಮ ಬ್ಯಾಂಕುಗಳ ಕೆಲವು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಬ್ಯಾಂಕ್ ಸಂಪನ್ಮೂಲಗಳು ಹೆಚ್ಚು ದಕ್ಷವಾದ ರೀತಿಯಲ್ಲಿ ಪುನರಾವರ್ತನೆಯಾಗಬೇಕು, ಬ್ಯಾಂಕಿಂಗ್ ಉದ್ಯಮದ ಉತ್ಪಾದಕತೆ ಸುಧಾರಿಸಬೇಕು, ಭಾರತೀಯ ಬ್ಯಾಂಕುಗಳ ವಿದೇಶಿ ಶಾಖೆಗಳ ಕಲಾಪಗಳನ್ನು ಹೆಚ್ಚಿನ ಶಿಸ್ತಿಗೆ ಒಳಪಡಿಸಬೇಕು— ಎಂಬುದು ಅದರ ಸಲಹೆ. ಸಂಪನ್ಮೂಲಗಳ ದಕ್ಷ ಪುನರಾವರ್ತನೆಗೆ ಎರಡು ಸಮಸ್ಯೆಗಳ ಪರಿಹಾರವಾಗಬೇಕು. ಬ್ಯಾಂಕ್ ಮುಂಗಡಗಳ —ಮುಖ್ಯವಾಗಿ ಕೃಷಿಕ್ಷೇತ್ರದ ಮುಂಗಡಗಳ— ವಸೂಲಿಯದು ಒಂದು ಸಮಸ್ಯೆ. ಅಸ್ವಸ್ಥ ಕೈಗಾರಿಕಾ ಘಟಕಗಳ ಪುನಶ್ಚೈತನ್ಯ ಕುರಿತದ್ದು ಇನ್ನೊಂದು ಸಮಸ್ಯೆ. ಸರ್ಕಾರಿ ವಲಯದ ಬ್ಯಾಂಕುಗಳು ಕೃಷಿಕ್ಷೇತ್ರಕ್ಕೆ ನೀಡಿರುವ ಮುಂಗಡಗಳ ವಸೂಲಿ 1983ರ ಜೂನ್ ಕೊನೆಯಲ್ಲಿ ಶೇ. 53.2 ಇದ್ದದ್ದು, 1984ರ ಜೂನ್ ವೇಳೆಗೆ ಶೇ. 51.3ಕ್ಕೆ ಇಳಿದಿತ್ತು. ಎರಡು ವರ್ಷ ಒಳ್ಳೆಯ ಮಳೆ ಬೆಳೆ ಆಗಿದ್ದಾಗ್ಯೂ ವಸೂಲಿ ಮಾತ್ರ ಹಿಂದೆ ಬಿದ್ದಿರುವುದು ವಿವರಿಸಲಾಗದ ಸಂಗತಿ. ವಸೂಲಿಯ ಪ್ರಮಾಣ ಬೇರೆಬೇರೆ ರಾಜ್ಯಗಳಲ್ಲಿ ಬೇರೆಬೇರೆ ರೀತಿ ಇರುವುದು ಈ ಸಮಸ್ಯೆಯ ಇನ್ನೊಂದು ಮುಖ. ಪಶ್ಚಿಮಬಂಗಾಲದಲ್ಲಿ ಇದು ಶೇ 28.3ರಷ್ಟು ಕಡಿಮೆ, ಪಂಜಾಬಿನಲ್ಲಿ ಶೇ 74.1 ರಷ್ಟು ಅಧಿಕ. ಏಕೆ ಹೀಗೆ ಎಂಬುದನ್ನು ಕುರಿತು ಗಂಭೀರವಾಗಿ ಚಿಂತಿಸಬೇಕು.

ಬ್ಯಾಂಕುಗಳ ಒಟ್ಟು ಉದ್ದರಿಯಲ್ಲಿ ಶೇ. 7–8 ರಷ್ಟು ಭಾಗ ಅಸ್ವಸ್ಥ ಕೈಗಾರಿಕೆಗಳಲ್ಲಿ ತೊಡರಿಹೋಗಿದೆ. ಜೀವಂತಿಕೆಯ ಭವ ಸಾಮರ್ಥ್ಯವುಳ್ಳ ಘಟಕಗಳನ್ನು ಪುನರುಜ್ಜೀವನಗೊಳಿಸುವ, ಹಾಗೂ ಈ ಸಾಮರ್ಥ್ಯವಿಲ್ಲದವುಗಳ ಬಗ್ಗೆ ಕಟುವಾದ ತೀರ್ಮಾನ ತೆಗೆದುಕೊಳ್ಳುವ, ವಾಸ್ತವಿಕ ನಿಲುವು ತಳೆಯುವ ಸೂಚನೆ ಇದ್ದಂತಿದೆ. ಏನೇ ಆದರೂ ತೀರ್ಮಾನವನ್ನು ಬೇಗ ತೆಗೆದುಕೊಳ್ಳುವಂತಿರಬೇಕು. ಹಾವೂ ಸಾಯಬಾರದು, ಕೋಲೂ ಮುರಿಯಬಾರದು ಎಂಬ ಧೋರಣೆಯಿಂದ ಮಹಾ ಅಪಾಯ. ಈ ನಿಟ್ಟಿನಲ್ಲಿ ಯುಕ್ತವಾದ ಕ್ರಮ ತೆಗೆದುಕೊಳ್ಳುವುದರಿಂದ ಬ್ಯಾಂಕುಗಳ ಲಾಭಪ್ರದತೆ ಉತ್ತಮಗೊಳ್ಳಲು ಸಹಾಯವಾದೀತು.

ಬ್ಯಾಂಕ್ ಶಾಖೆಗಳ ವ್ಯಾಪಕ ಜಾಲದ ರಚನೆಯ ಕಡೆಗೂ ರಿಸರ್ವ್ ಬ್ಯಾಂಕ್ ವರದಿ ತನ್ನ ದೃಷ್ಟಿ ಹರಿಸಿದೆ. ಶಾಖಾ ವಿಸ್ತರಣೆಯಿಂದ ಬ್ಯಾಂಕಿಂಗ್ ಅಧೋರಚನೆ ವಿಶಾಲವಾಗಿದೆ, ಆಳಕ್ಕೆ ಇಳಿದಿದೆ ಎಂಬುದು ನಿಜ. ಆರ್ಥಿಕ ಬೆಳೆವಣಿಗೆಗೆ ಇದರಿಂದ ಪ್ರಯೋಜನ ಉಂಟು ಎಂಬುದೂ ಸರಿಯೇ. ಬ್ಯಾಂಕ್ ಉದ್ದರಿಯ ಪ್ರವಿಸ್ತಾರಣದಲ್ಲಿ (ಡೀಪ್ಲಾಯ್‌ಮೆಂಟ್) ಸಂರಚನಾತ್ಮಕ ಪರಿವರ್ತನೆಯೇನೋ ಆಗಿದೆ. ಆದ್ಯತಾವಲಯಗಳಿಗೆ ಹಾಗೂ ದುರ್ಬಲವರ್ಗಗಳಿಗೆ ಹೆಚ್ಚು ಅನುಕೂಲವಾಗುವಂತಾಗಿದೆ. ಆದರೆ ಅಭೂತಪೂರ್ವ ಶಾಖಾವಿಸ್ತರಣೆಯ ಹಿಂದೆಯೇ ಅನೇಕ ಸಮಸ್ಯೆಗಳ ಉದ್ಭವವಾಗಿದೆಯೆಂಬುದನ್ನೂ ರಿಸರ್ವ್ ಬ್ಯಾಂಕ್ ಗಮನಿಸಿದೆ. ಕಲಾಪದಲ್ಲಿ ಅದಕ್ಷತೆ, ಮನವಾರ್ತೆಯಲ್ಲಿ ಅಸಮರ್ಪಕತೆ, ಗ್ರಾಹಕ ಸೇವೆಯಲ್ಲಿ ಅತೃಪ್ತಿ—ಇವು ರಿಸರ್ವ್ ಬ್ಯಾಂಕ್ ಹೆಸರಿಸಿರುವ ಕೆಲವು ಕಹಿ ಫಲಗಳು. ಆದ್ದರಿಂದ ಶಾಖಾ ವಿಸ್ತರಣೆಯಲ್ಲಾಗಿರುವ ಪ್ರಗತಿಯನ್ನು ಕ್ರೋಡೀಕರಿಸುವತ್ತ ಲಕ್ಷ್ಯಹರಿಸಬೇಕೆಂದು ರಿಸರ್ವ್ ಬ್ಯಾಂಕ್ ಹೇಳಿದೆ. ಈ ಮೂರೂ ನಿಟ್ಟುಗಳಲ್ಲಿ ಸುಧಾರಣೆ ಆಗಬೇಕೆಂದು ಅದು ಆಶಿಸುತ್ತದೆ. ವೆಚ್ಚದತ್ತ ಹೆಚ್ಚಿನ ಅನುಲಕ್ಷ್ಯ, ನಿರ್ಧೀತರ ವ್ಯವಹಾರದ ಸುಧಾರಣೆ—ಇವು ಕೂಡ ಪ್ರಸಕ್ತ ಎನ್ನುತ್ತದೆ, ರಿಸರ್ವ್ ಬ್ಯಾಂಕ್.

ಬ್ಯಾಂಕು ಠೇವಣಿಗಳ ಬೆಳೆವಣಿಗೆಗೆ ಸಂಬಂಧಿಸಿದಂತೆ ರಿಸರ್ವ್ ಬ್ಯಾಂಕ್ ವರದಿ ಇನ್ನೊಂದು ಪ್ರವೃತ್ತಿಯನ್ನು ಗುರುತಿಸಿದೆ. ವರ್ಷದ ಠೇವಣಿ ಸಂಗ್ರಹಣೆಯ ಗುರಿಯನ್ನು ನಿಲುಕುವ ಸಲುವಾಗಿ ಬ್ಯಾಂಕುಗಳು ಕೊನೆಯ ತಿಂಗಳುಗಳಲ್ಲಿ ವಿಶೇಷವಾಗಿ ಶ್ರಮಿಸುವುದು ಸಾಮಾನ್ಯ. ವರ್ಷದ ಕೊನೆಯ ದಿನದಂದು ಹೆಚ್ಚು ಠೇವಣಿ ತೋರಿಸಲು ನಾನಾ ಉಪಾಯುಗಳನ್ನನುಸರಿಸುವುದೂ ವಾಡಿಕೆಯಾಗಿ ಬಂದಿತ್ತು. ಮೇಲ್ಮೆರಗು (ವಿಂಡೊ-ಡ್ರೆಸಿಂಗ್) ಮಾಡುವುದನ್ನು ಬಿಡಬೇಕೆಂಬ ರಿಸರ್ವ್ ಬ್ಯಾಂಕಿನ ಸಲಹೆಯಂತೆ ಈಗ ಈ ಪದ್ಧತಿಯನ್ನು ಬ್ಯಾಂಕುಗಳು ಬಿಟ್ಟಿವೆಯೆನ್ನಲಾಗಿದೆ. ಡಿಸೆಂಬರ್‌ನ ಅನಂತರದ ತಿಂಗಳುಗಳಲ್ಲಿ ಠೇವಣಿ ಅಂಕಿಗಳಲ್ಲಿ ಅಷ್ಟೇನೂ ವ್ಯತ್ಯಾಸವಾಗದಿರುವುದು ಒಂದು ಆರೋಗ್ಯಕರ ಪ್ರವೃತ್ತಿ ಎಂದು ರಿಸರ್ವ್ ಬ್ಯಾಂಕ್ ಮೆಚ್ಚುಗೆ ಸೂಚಿಸಿದೆ.

ಒಟ್ಟಿನಲ್ಲಿ ಬ್ಯಾಂಕುಗಳ ಹೊಣೆಗಾರಿಕೆ ಗುರುತರವಾದ್ದು, ಸಂಕೀರ್ಣವಾದ್ದು. ಗ್ರಾಹಕ ಸೇವೆ, ಮನವಾರ್ತೆ, ಶಾಖೆಗಳ ಮೇಲೆ ಪ್ರಧಾನ ಕಛೇರಿಯ ನಿಯಂತ್ರಣ, ಸುಸಜ್ಜಿತ ಮಾಹಿತಿ ವ್ಯವಸ್ಥೆಯ ಮೂಲಕ ಸುಧಾರಿತ ನೀತಿ ರೂಪಣೆ ಮುಂತಾದವುಗಳನ್ನು ಸಾಧಿಸಲು ಬ್ಯಾಂಕುಗಳು ಯಾಂತ್ರೀಕರಣದ ಹಾದಿಯಲ್ಲಿ ನಡೆಯಬೇಕೆಂದು ರಿಸರ್ವ್ ಬ್ಯಾಂಕ್ ಅಭಿಪ್ರಾಯಪಟ್ಟಿದೆ. ಈ ಬಗ್ಗೆ ರಿಸರ್ವ್ ಬ್ಯಾಂಕ್ ನೇಮಿಸಿದ್ದ ಸಮಿತಿಯ ಶಿಫಾರಸುಗಳಿಗೆ ಅನುಗುಣವಾಗಿ ಹಂತಹಂತವಾಗಿ ಪ್ರಗತಿ ಸಾಧಿಸುವುದು ಅಗತ್ಯವೆಂದು ಆಶಿಸಿದೆ. ಬ್ಯಾಂಕಿಂಗ್ ಕಲಾಪಗಳಲ್ಲಿ ವೇಗ – ಉತ್ಪಾದಕತೆಗಳನ್ನು ಹೆಚ್ಚಿಸುವುದರ ಪ್ರಾಮುಖ್ಯವನ್ನು ವರದಿ ಒತ್ತಿ ಹೇಳಿದೆ. ವಿದೇಶಿ ಬ್ಯಾಂಕುಗಳ ನಿಯಂತ್ರಣ ವ್ಯವಸ್ಥೆಯನ್ನು ನಿರುಕಿಸುವ, ಶಿಸ್ತಿಗೆ ಒಳಪಡಿಸುವ ಅಗತ್ಯವೂ ಕಡಿಮೆಯೇನಲ್ಲ. ಬ್ಯಾಂಕುಗಳು ಈ ನಾನಾ ವಿಚಾರಗಳತ್ತ ತಮ್ಮ ಗಮನ ಹರಿಸುವುದು ಅತ್ಯಂತ ಜರೂರು ಎಂಬುದು ನಿಸ್ಸಂದೇಹ.

## ದರ್ಬಾರಿ ಬ್ಯಾಂಕಿಂಗ್

ಬ್ಯಾಂಕ್ ರಾಷ್ಟ್ರೀಕರಣದ ಒಂದು ಪ್ರಮುಖ ಉದ್ದೇಶವೆಂದರೆ ಸಾಮಾಜಿಕ ಬ್ಯಾಂಕಿಂಗ್ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ದೀನ ದರಿದ್ರರು ತಮ್ಮ ಕಾಲ ಮೇಲೆ ತಾವು ನಿಲ್ಲುವುದು ಸಾಧ್ಯವಾಗುವಂತೆ, ಗೌರವಕ್ಕೆ ಭಂಗಬಾರದ ರೀತಿ ಅವರು ಸ್ವಯಂ-ಉದ್ಯೋಗಶಾಲಿಗಳಾಗುವಂತೆ, ರಾಷ್ಟ್ರದಸಂಪತ್ತಿಗೆ ಅವರೂ ಕಾಣಿಕೆ ಸಲ್ಲಿಸುವುದು ಸಾಧ್ಯವಾಗುವಂತೆ, ಇಡೀ ಅರ್ಥವ್ಯವಸ್ಥೆಯೇ ಜಡತ್ವವನ್ನು ನೀಗಿ ಚೈತನ್ಯಪೂರ್ಣವಾಗುವಂತೆ ಮಾಡುವುದು ಸಾಮಾಜಿಕ ಬ್ಯಾಂಕಿಂಗಿನ ಗುರಿ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಇದೊಂದು ಕ್ರಾಂತಿಯೇ ಸರಿ. ಇದಕ್ಕೆ ಬ್ಯಾಂಕುಗಳ ಸಾಲ ಯಾವ ರೀತಿ ನೆರವಾಗಬಲ್ಲುದು, ಸಾಲದ ಗುಣಮಟ್ಟ ಇಳಿಯದಂತೆ ಕಾಯ್ದುಕೊಂಡು ಆದ್ಯತಾ ವಲಯಕ್ಕೆ ಸಾಲ ನೀಡುವುದು ಹೇಗೆ ಎಂಬುದು ಎಲ್ಲ ಹೊಣೆಗಾರರ ಕಾಳಜಿಯಾಗಬೇಕು. ಬ್ಯಾಂಕು ನೀಡುವ ಸಾಲದಿಂದ ಹೊಸ ಆಸ್ತಿ ಸೃಷ್ಟಿಯಾದರೆ, ಅದನ್ನು ಸೃಷ್ಟಿಸುವ ಸಾಮರ್ಥ್ಯ ಸಾಲಗಾರರಿಗೆ ಬಂದರೆ, ಆ ಸಾಮರ್ಥ್ಯ ಅವರಿಗೆ ಬರುವಂತೆ ಸುಯೋಜಿತ ಕಾರ್ಯಕ್ರಮ

ವೊಂದು ಜಾರಿಗೆ ಬಂದರೆ, ಅದರ ಸಾರ್ಥಕತೆ-ಅಸಾರ್ಥಕತೆಗಳನ್ನು ಅಳೆಯುವ ನಿರ್ದುಷ್ಟ ವಿಧಾನವೊಂದು ರೂಪಿತವಾದರೆ ಆಗ ಮಾತ್ರ ಸಾಮಾಜಿಕ ಬ್ಯಾಂಕಿಂಗಿಗೆ ಅರ್ಥ ಬರುತ್ತದೆ, ಮೌಲ್ಯ ಬರುತ್ತದೆ. ಇಲ್ಲದಿದ್ದರೆ ಬರೀ ಹಣದ ಹೊಳೆ ಹರಿದು, ಸಮಾಜದ ತಳವನ್ನೇ ಅದು ಕೊಚ್ಚಿಹಾಕುತ್ತದೆ, ಬೆಲೆಗಳ ಧೃಢತೆಯನ್ನು ಕಳಚಿಬಿಡುತ್ತದೆ. ಬ್ಯಾಂಕುಗಳ ಬ್ಯಾಂಕಾದ, ದೇಶದ ಕೇಂದ್ರೀಯ ಬ್ಯಾಂಕಾದ ರಿಸರ್ವ್ ಬ್ಯಾಂಕು ಇಡೀ ಬ್ಯಾಂಕಿಂಗ್ ವ್ಯವಸ್ಥೆಯ ಮೇಲೆ ತನ್ನ ಗರುಡ ದೃಷ್ಟಿಯನ್ನಿಟ್ಟು ಅದನ್ನು ನಿರ್ದಿಷ್ಟ ದಿಕ್ಕಿನಲ್ಲಿ ನಡೆಸುವುದು ಅಗತ್ಯ. ರಿಸರ್ವ್ ಬ್ಯಾಂಕ್ ಮಾತ್ರವೇ ಈ ಕೆಲಸ ಸಾಧಿಸಬಲ್ಲುದು ; ಸರ್ಕಾರವಲ್ಲ, ಬೇರೆ ಯಾವುದೇ ಬ್ಯಾಂಕೇತರ ವ್ಯವಸ್ಥೆಯಲ್ಲ. ಆದರೆ ಇಂದು ರಿಸರ್ವ್ ಬ್ಯಾಂಕ್ ಈ ಕೆಲಸವನ್ನು ನಿರ್ವಹಿಸಲು ಯುಕ್ತವಾದ ವಾತಾವರಣ ಸೃಷ್ಟಿಯಾಗಿಲ್ಲ.

ಬ್ಯಾಂಕು ಇಂದು ಹಲವು ಯಜಮಾನರ ಅಡಿಯಲ್ಲಿ ಕೆಲಸ ಮಾಡಬೇಕಾಗಿದೆ. ಅದು ದ್ರೌಪದಿಯಂತಾಗಿದೆ. ದ್ರೌಪದಿಗೆ ಐವರು ಗಂಡಂದಿರಿದ್ದರೂ ಅವರು ಸೋದರರು,ಪರಸ್ಪರ ಮರ್ಯಾದೆಯನ್ನು ಬಲ್ಲವರಾಗಿದ್ದರು, ಅದನ್ನು ರಕ್ಷಿಸುವವರಾಗಿದ್ದರು. ಸ್ವಯಂನಿರ್ಮಿತ ಶಿಸ್ತೊಂದು ಅವರಲ್ಲೂ ಇತ್ತು. ಆದರೆ ಈ ಅಭಿನವ ದ್ರೌಪದಿಯ ಗಂಡಂದಿರಲ್ಲಿ ಆ ಬಗೆಯ ಶಿಸ್ತಿನ, ಪರಸ್ಪರ ಮರ್ಯಾದೆಯ ಸ್ಥಾಪನೆ ಸಾಧ್ಯವಾಗಿದೆಯೆ ಎಂಬುದನ್ನು ಗಂಭೀರವಾಗಿ ಯೋಚಿಸಬೇಕಾಗಿದೆ. ಸರ್ಕಾರದ ಒಡೆತನಕ್ಕೆ ಸೇರಿದ ಬ್ಯಾಂಕುಗಳು ಬ್ರಿಟಿಷರ ಕಾಲದಲ್ಲಿ ಏರ್ಪಟ್ಟಿದ್ದ ದ್ವಿಮುಖ ಆಡಳಿತ ಪದ್ಧತಿಯಂಥ ವ್ಯವಸ್ಥೆಯಡಿ ಕೆಲಸ ಮಾಡಬೇಕಾಗಿದೆ. ಯಾವ ಪಕ್ಷ ಕೇಂದ್ರದಲ್ಲಿ ಅಧಿಕಾರದಲ್ಲಿದೆಯೋ ಆ ಪಕ್ಷದ ನಾನಾ ಸ್ತರಗಳ ರಾಜಕೀಯ ವ್ಯಕ್ತಿ ಶಕ್ತಿಗಳ ಪ್ರಭಾವಗಳಿಗೆ ಅವು ಒಳಗಾಗಬೇಕಾಗಿದೆ. ಹಲವು ವೇಳೆ ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಸೆಳೆತ ಉಂಟಾಗುತ್ತದೆ. ರಾಜ್ಯದಲ್ಲಿ ಬೇರೊಂದು ಪಕ್ಷದ ಆಡಳಿತವಿದ್ದರೆ ಆಗ ಉದ್ಭವಿಸುವ ವಾದ-ಪ್ರತಿವಾದಗಳ ಸುಳಿಗೆ ಬ್ಯಾಂಕೂ ಸಿಕ್ಕಿಕೊಳ್ಳುತ್ತದೆ. ಅಲ್ಲದೆ ಹಲವೇಳೆ ಯಾದೃಚ್ಛಿಕವಾದ ರೀತಿಯಲ್ಲಿ ಧನಪೋಷಣೆ ಮಾಡಬೇಕಾಗುತ್ತದೆ. ಒಂದು ಹಳ್ಳಿಯಿಂದ ಪೇಟೆಗೆ ಒಯ್ಯಲು ಲಭ್ಯವಿರುವ ಹೆಚ್ಚುವರಿ ಉತ್ಪನ್ನ ಎಷ್ಟಿದೆ, ಎಷ್ಟು ಗಾಡಿಗಳ ಅಗತ್ಯವಿದೆ ಎಂಬುದರ ಪರಿವೆಯಿಲ್ಲದೆ ಹಲವಾರು ಗಾಡಿಗಳನ್ನು ಕೊಳ್ಳಲು ಬ್ಯಾಂಕು ಸಾಲನೀಡಿರುವುದೂ, ಆ ಗಾಡಿಗಳು ಉಪಯೋಗವಿಲ್ಲದೆ ಬಿದ್ದಿರುವುದೂ ಉಂಟು. ಕರಾವು ಹಸುಗಳಿಗೆ ಸಾಲ ಕೊಡುವಾಗ, ಆ ಹಸುಗಳು ಕರೆಯುವ ಹಾಲಿನ ಮಾರಾಟಕ್ಕೆ ಯುಕ್ತ ವ್ಯವಸ್ಥೆಯಿದೆಯೆ ಎಂದು ನೋಡದಿರಬಹುದು, ಮೇವಿನ ವ್ಯವಸ್ಥೆ ಇಲ್ಲದೆಹೋಗಬಹುದು. ಆದಿವಾಸಿಗಳಿಗೆ ಮೇಕೆ ಕುರಿ ಇತ್ಯಾದಿ ಪ್ರಾಣಿಗಳನ್ನು ಕೊಳ್ಳಲು ಹಣ ನೀಡುವುದಷ್ಟೇ ಅಲ್ಲ, ಆ ಪ್ರಾಣಿಗಳು ಮರಿ ಹಾಕಿ ಅವುಗಳ ಮಾರಾಟದಿಂದ ಹಣ ಬರುವವರೆಗೂ ಆ ಜನರ ಜೀವನನಿರ್ವಹಣೆ ಸಾಧ್ಯವಾಗುವಂತೆ ವ್ಯವಸ್ಥೆ ಮಾಡದಿರುವುದು ಅಪರೂಪವೇನಲ್ಲ. ದೊರೆಗಳು ಹಿಂದಿನ ಕಾಲದಲ್ಲಿ ತಮ್ಮ ಆಸ್ಥಾನಿಕರಿಗೆ ಶಿಕ್ಷೆ ನೀಡುವ ಸಲುವಾಗಿ ಆನೆಯನ್ನು ದಾನವಾಗಿ ಕೊಡುತ್ತಿದ್ದರಂತೆ. ಅದನ್ನು ಸಾಕಲಾರದೆ ಅವರು ಬವಣೆಗೊಳಗಾಗಲಿ ಎಂಬುದು ಉದ್ದೇಶ. ಅನೇಕ ವೇಳೆ ಬ್ಯಾಂಕಿನ ಸಾಲನೀಡಿಕೆ ಆನೆಯನ್ನು ದಾನವಾಗಿ ನೀಡಿದಂತೆ ಆಗುತ್ತಿದೆಯೆ ? ಗ್ರಾಮೀಣ ಅಭಿವೃದ್ಧಿಗಾಗಿ ಏರ್ಪಟ್ಟಿರುವ ಸ್ಥಳೀಯ ವ್ಯವಸ್ಥೆಗೂ ಬ್ಯಾಂಕಿನ ಸಾಲಗಳಿಗೂ ತಾಳ ಕೂಡುತ್ತದೆಯೆ ? ಎಂಬುದನ್ನು ಗಂಭೀರವಾಗಿ ಪರಿಶೀಲಿಸುವ ಕಾಲವೀಗ ಬಂದಿದೆ. 'ಉದ್ದೇಶ ಘನ, ಪರಿಣಾಮ ಗಂಭೀರ' ಎಂಬ ಪರಿಸ್ಥಿತಿ ಉದ್ಭವವಾಗದಂತೆ ಎಚ್ಚರ ವಹಿಸುವುದು ಅಗತ್ಯವಾಗಿದೆ. ಈ ಬಗ್ಗೆ ಅನೇಕ ಪರಿಶೀಲನೆಗಳು ಕೂಗಿ ನುಡಿಯುತ್ತಿವೆ. ಇವನ್ನು ಕೇಳುವಂಥ ಸೂಕ್ಷ್ಮವಾದ ಕಿವಿಗಳು ನಮ್ಮ ಆಡಳಿತವ್ಯವಸ್ಥೆಗೆ ಇರಬೇಕು.

ವಿಶೇಷವಾಗಿ ಟೀಕೆಗೆ ಒಳಗಾಗಿರುವ ಇನ್ನೊಂದು ಬೆಳವಣಿಗೆಯೆಂದರೆ ಸಾಲ ಮೇಳಗಳದು. ಸರ್ಕಾರದ ಜನಪ್ರತಿನಿಧಿಗಳು ಇದನ್ನೊಂದು ರಾಜಕೀಯ ಪ್ರಚಾರ ಸಾಧನವಾಗಿ ಮಾಡಿಕೊಂಡಿದ್ದಾರೆಂಬ ಟೀಕೆ ಕೇಳಿಬರುತ್ತಿದೆ. ಪ್ರತಿಯೊಂದು ಸಾಲ ಮೇಳವೂ ಸಾವಿರಾರು ಮಂದಿಗೆ ಹಣ ಹಂಚುವ ವಿಧಾನವಾಗಿ ಪರಿಣಮಿಸಿದೆ. ಬ್ಯಾಂಕುಗಳಿಗೆ—ಅಧಿಕಾರಿಗಳಿಗೂ ಉದ್ಯೋಗಿಗಳಿಗೂ—ಉಪದೇಶ ಮಾಡುವ ಸಂದರ್ಭ ಕೂಡ ಅದು. ಹೀಗೆ ಹಂಚಿದ್ದನ್ನು ಹಿಂದಿರುಗಿ ಕೊಡಬೇಕೆ, ಕೊಡುವ ಸಾಮರ್ಥ್ಯ ಸಾಲಗಾರರಿಗೆ ದೊರಕುತ್ತದೆಯೆ ಎಂಬ ಬಗ್ಗೆ ಯಾರೂ ಯೋಚಿಸುತ್ತಿಲ್ಲ. ಇದು ಸಾಮಾಜಿಕ ಬ್ಯಾಂಕಿಂಗ್ ಅಲ್ಲ, ದರ್ಬಾರಿ ಬ್ಯಾಂಕಿಂಗ್ ಎಂದು ದೇಶದ ಪ್ರಮುಖ ಅರ್ಥಶಾಸ್ತ್ರ ಪತ್ರಿಕೆಯೊಂದು ತನ್ನ ಸಂಪಾದಕೀಯವೊಂದರಲ್ಲಿ ಬಣ್ಣಿಸಿ ಬರೆದಿತ್ತು. ಬ್ಯಾಂಕಿಂಗ್ ವ್ಯವಸ್ಥೆಯೊಳಗೆ ಇಂಥ ಮೇಳಗಳು ಹೇಗೆ ಹೊಂದಿಕೊಳ್ಳುವುದು ಸಾಧ್ಯ ಎಂಬುದನ್ನು ಪೂರ್ವಾಗ್ರಹವಿಲ್ಲದೆ ಚಿಂತಿಸುವುದು ಅಗತ್ಯ.

## ಗ್ರಾಹಕ ಸೇವೆ

ಬ್ಯಾಂಕುಗಳ ಗ್ರಾಹಕ ಸೇವೆಯ ಗುಣಮಟ್ಟ ಬಹಳ ಕಡಿಮೆಯಾಗಿದೆಯೆಂಬುದು ಈಚೆಗೆ ಪದೇ ಪದೇ ಕೇಳಿಬರುತ್ತಿರುವ ಒಂದು ಟೀಕೆ. ಇದನ್ನು ಉತ್ತಮಪಡಿಸಲು ಬ್ಯಾಂಕುಗಳೂ ಸರ್ಕಾರವೂ ರಿಸರ್ವ್ ಬ್ಯಾಂಕೂ ಭಾರತೀಯ ಬ್ಯಾಂಕುಗಳ ಸಂಘವೂ ವಿಶೇಷವಾದ ಕ್ರಮಗಳನ್ನು ಕೈಗೊಂಡಿವೆ. ಎಲ್ಲ ಪ್ರಮುಖ ನಗರಗಳಲ್ಲೂ ಗ್ರಾಹಕ ಸೇವಾ ಕೇಂದ್ರಗಳನ್ನೂ ಗ್ರಾಹಕರ ಆಕ್ಷೇಪಣೆಗಳ ಕೇಂದ್ರಗಳನ್ನೂ ತೆರೆಯಲು ಭಾರತೀಯ ಬ್ಯಾಂಕುಗಳ ಸಂಘ ತೀರ್ಮಾನಿಸಿದೆ. ಬ್ಯಾಂಕರುಗಳು ಸದಾ ತುದಿಗಾಲ ಮೇಲೆ ನಿಂತಿರುವಂತೆ ಮಾಡುವುದೇ ಇವುಗಳ ಸ್ಥಾಪನೆಯ ಉದ್ದೇಶ ಎಂಬುದು ಭಾರತೀಯ ಬ್ಯಾಂಕುಗಳ ಸಂಘದ ಅಧ್ಯಕ್ಷ ಫೋಯಿಪೋರಿಯಾ ಅವರ ಮಾತು.

ಬ್ಯಾಂಕುಗಳ ದಕ್ಷತೆ ಉತ್ಪಾದಕತೆಗಳನ್ನು ಹೆಚ್ಚಿಸಬೇಕೆಂಬುದು ಸರ್ಕಾರದ ಕಾಳಜಿ. ಪ್ರತಿ ಮೂರು ತಿಂಗಳುಗಳಿಗೆ ಒಮ್ಮೆ ಬ್ಯಾಂಕ್ ಅಧ್ಯಕ್ಷರುಗಳ ಹಾಗೂ ಇತರ ಮುಖ್ಯ ಕಾರ್ಯನಿರ್ವಾಹಕರುಗಳ ಸಭೆಗಳನ್ನು ಕೇಂದ್ರ ಹಣಕಾಸು ಮಂತ್ರಿಗಳು ಸೇರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಆಗಿರುವ ಪ್ರಗತಿಯನ್ನು ಪರಿಶೀಲಿಸುವುದು ಉದ್ದೇಶ. ದಕ್ಷತೆ, ಲಾಭಪ್ರದತೆ, ರಾಷ್ಟ್ರೀಯ ಗುರಿಗಳ ಸಾಧನೆ, ಮನೆವಾರ್ತೆಯ ಉತ್ತಮಿಕೆ, ಗ್ರಾಹಕ ಸೇವಾ ಸುಧಾರಣೆ, ಗಣಕೀಕರಣ, ಅಂತರ ಬ್ಯಾಂಕ್ ಲೆಕ್ಕ ಸಮನ್ವಯೀಕರಣ ಮುಂತಾದ ವಿಚಾರಗಳು ಇಲ್ಲಿ ಚರ್ಚೆಗೆ ಬರುತ್ತವೆ. ಪ್ರತಿಯೊಂದು ಬ್ಯಾಂಕಿನ ಅಧ್ಯಕ್ಷರೂ ಈ ಬಗ್ಗೆ ವಿವರಣೆ ನೀಡಬೇಕಾಗುತ್ತದೆ, ಪ್ರಶ್ನೆಗಳನ್ನು ಉತ್ತರಿಸಬೇಕಾಗುತ್ತದೆ. ವಿವಿಧ ಪ್ರಾಕಾರಗಳ ಕಕ್ಷೆಗಳೊಳಗೆ ನಿರ್ಧರಿಸಲಾದ ನಾನಾ ಗುರಿಗಳ ಸಾಧನೆಯಲ್ಲಿ ಆಗಿರುವ ಪ್ರಗತಿಯ ಅವಲೋಕನಕ್ಕಾಗಿ ಪ್ರತಿ ಮೂರು ತಿಂಗಳುಗಳಿಗೆ ಒಮ್ಮೆ ರಿಸರ್ವ್ ಬ್ಯಾಂಕೂ ಈ ಬಗೆಯ ಸಭೆಗಳನ್ನು ಏರ್ಪಡಿಸುತ್ತಿದೆ. ವಿದೇಶಗಳಲ್ಲಿರುವ ಭಾರತೀಯ ಬ್ಯಾಂಕ್ ಶಾಖೆಗಳ ಭಾರತೀಯ ಗ್ರಾಹಕರಿಗೆ ಹಾಳತವಾದ ಸೇವೆ ದೊರಕುವಂತೆ ಮಾಡಲು ಹೊಸ ಪರಿವೀಕ್ಷಣ ವ್ಯವಸ್ಥೆಯೊಂದನ್ನು ಸ್ಥಾಪಿಸುವ

ವಿಚಾರವೂ ರಿಸರ್ವ್ ಬ್ಯಾಂಕಿನ ಪರಿಶೀಲನೆಯಲ್ಲಿದೆಯೆಂದು ವರದಿಯಾಗಿದೆ.

ಬ್ಯಾಂಕುಗಳ ನಡುವೆ ಸ್ಪರ್ಧಾತ್ಮಕ ಮನೋಧರ್ಮ ಬೆಳೆಯುವಂತೆ ಮಾಡಲೂ ಪ್ರಯತ್ನ ನಡೆದಿದೆ. ಗ್ರಾಹಕರಿಗೆ ಉತ್ತಮ ಸೇವೆ ಸಲ್ಲಿಸುವಲ್ಲಿ ಈ ಸ್ಪರ್ಧೆ ಅಭಿವ್ಯಕ್ತಗೊಂಡಿದೆ. ಚೆಕ್ಕು, ಡ್ರಾಫ್ಟು, ಲಾಭಾಂಶ ಅಧಿಪತ್ರ (ಡಿವಿಡೆಂಡ್ ವಾರಂಟ್), ಅಂಚೆ ವರ್ಗಾವಣೆ ತಿಳಿವಳಿಕೆ ಪತ್ರ ಮುಂತಾದವಕ್ಕೆ ಸಂಬಂಧಿಸಿದಂತೆ ವಸೂಲಿಯನ್ನು ತ್ವರೆಗೊಳಿಸಲು ಭಾರತೀಯ ಸ್ಟೇಟ್ ಬ್ಯಾಂಕು 'ವೇಗವಾಹಿನಿ' (ಸ್ಪೀಡ್‌ಲೈನ್) ವ್ಯವಸ್ಥೆಯೊಂದನ್ನು ಜಾರಿಗೆ ತಂದಿದೆ. ಹತ್ತು ದಿನಗಳಿಗೂ ಹೆಚ್ಚು ವಿಳಂಬವಾಗದಂತೆ ನೋಡಿಕೊಳ್ಳಲಾಗುತ್ತಿದೆ. ಇಪ್ಪತ್ತೆಂಟು ದಿನಗಳಿಗೂ ಹೆಚ್ಚು ವಿಳಂಬವಾದಲ್ಲಿ ಗ್ರಾಹಕರಿಗೆ ಆ ಮೊಬಲಗಿನ ಮೇಲೆ ಬಡ್ಡಿ ಕೊಡಲೂ ಮುಂದೆ ಬಂದಿದೆ. ಮುಂದಿನ ಆರು ತಿಂಗಳುಗಳಿಗೂ ಹೆಚ್ಚು ವಿಳಂಬವಾದರೆ ಎಂಟು ದಿನಗಳನ್ನು ಮೀರಿದ ಅವಧಿಗೆ ಬಡ್ಡಿ ನೀಡುವುದಾಗಿ ಬ್ಯಾಂಕಿನ ಅಧ್ಯಕ್ಷರು ಹೇಳಿದ್ದಾರೆ. ಬ್ಯಾಂಕ್ ಸೇವೆಯ ಗುಣಮಟ್ಟವನ್ನು ಹೆಚ್ಚಿಸಲು ತೆಗೆದುಕೊಳ್ಳಲಾಗುತ್ತಿರುವ ಇನ್ನೊಂದು ಕ್ರಮವೆಂದರೆ ಹರಿಕಾರ ಸೇವೆಯ ವಿಸ್ತರಣೆ. ಇದು ಈಗ ಹದಿನೆಂಟು ನಗರಗಳಿಗೆ ಅನ್ವಯವಾಗಿದೆ. ಇದನ್ನು ಮೂವತ್ತು ನಗರಗಳಿಗೆ ವಿಸ್ತರಿಸಬೇಕೆಂಬುದು ಭಾರತೀಯ ಬ್ಯಾಂಕುಗಳ ಸಂಘದ ಯೋಚನೆ. ದೇಶದ ಎಲ್ಲ ರಾಜ್ಯಗಳ ರಾಜಧಾನಿಗಳ ನಡುವೆ ತನ್ನದೇ ಹರಿಕಾರ ಸೇವೆ (ಕೂರಿಯರ್ ಸರ್ವಿಸ್) ಏರ್ಪಡಿಸಿಕೊಳ್ಳಬೇಕೆಂದು ಭಾರತೀಯ ಸ್ಟೇಟ್ ಬ್ಯಾಂಕ್ ತೀರ್ಮಾನಿಸಿದೆ. ಇತರ ಬ್ಯಾಂಕುಗಳೂ ಇಂಥ ಯೋಜನೆಗಳನ್ನು ಹೊಂದಿವೆ.

## ಬ್ಯಾಂಕ್ ಶುಲ್ಕಗಳು

ಪ್ರತಿಯೊಂದು ಸೇವೆಗೂ ಅದರದೇ ವೆಚ್ಚ ತಗಲುತ್ತದೆ ಎಂಬುದು ನಿರ್ವಿವಾದ. ಉತ್ತಮ ಸೇವೆ, ಉತ್ತಮ ಲಾಭ ಇವು ಒಂದೇ ನಾಣ್ಯದ ಎರಡು ಬದಿಗಳು. ಅಧಿಕ ವೆಚ್ಚದಿಂದಾಗಿ ತೀವ್ರ ಸಂಕಷ್ಟಕ್ಕೆ ಒಳಗಾಗಿರುವ ಬ್ಯಾಂಕುಗಳು ಉತ್ತಮ ಸೇವೆ ಸಲ್ಲಿಕೆಯ ಮಾತಿನೊಂದಿಗೇ ಸೇವಾ ಶುಲ್ಕಗಳನ್ನು ಏರಿಸುವ ಕ್ರಮವನ್ನೂ ತೆಗೆದುಕೊಂಡಿವೆ. ಈ ವಿಚಾರದಲ್ಲಿ ಯಾವ ಬ್ಯಾಂಕೂ ಹಿಂದೆ ಬಿದ್ದಿಲ್ಲ. ಈ ಏರಿಕೆಗಳು ಸಮಾನವಾಗಿವೆ. ಭಾರತೀಯ ಬ್ಯಾಂಕುಗಳಲ್ಲಿ ಅತಿ ದೊಡ್ಡದಾದ, ಅಗ್ರಸ್ಥಾನದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕೇ ಈ ವಿಚಾರದಲ್ಲೂ ಮುಂದಾಳುತನ ವಹಿಸಿದೆ. ಇತರ ಬ್ಯಾಂಕುಗಳೂ ಇದೇ ದಾರಿ ಹಿಡಿದಿವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಎಲ್ಲ ವೆಚ್ಚಗಳೂ ತೀವ್ರವಾಗಿ ಏರುತ್ತಲೇ ಬಂದಿದ್ದರೂ ಬ್ಯಾಂಕುಗಳು ಸೇವಾ ಶುಲ್ಕಗಳನ್ನು ಏರಿಸದೆ ತಡೆಹಿಡಿದಿದ್ದುವು. ಈಗ ಏರಿಕೆ ಅನಿವಾರ್ಯ. ಈ ಏರಿಕೆ ತೀರ ಕಡಿದು ಎನಿಸುವುದು ಸಹಜ. ಹೀಗೆಂದು ಭಾರತೀಯ ಬ್ಯಾಂಕುಗಳ ಸಂಘದ ಅಧ್ಯಕ್ಷ ಎಂ. ಎನ್. ಘೋಯಿಪೋರಿಯಾ ಹೇಳಿದ್ದಾರೆ. ಇನ್ನು ಮುಂದೆ, ಅಗತ್ಯವೆನಿಸಿದಾಗ, ನಿಯತವಾಗಿ ಶುಲ್ಕಗಳನ್ನು ಏರಿಸುತ್ತೇವೆ ಎಂದು ಎಚ್ಚರಿಕೆಯನ್ನೂ ಅವರು ನೀಡಿದ್ದಾರೆ.

ಭಾರತೀಯ ಸ್ಟೇಟ್ ಬ್ಯಾಂಕನ್ನು ಅನುಸರಿಸಿ ಇತರ ಬ್ಯಾಂಕುಗಳೂ ಸೇವಾ ಶುಲ್ಕಗಳನ್ನು—ಹಂತ ಹಂತಗಳಿಗೆ ಸಂಬಂಧಿಸಿದಂತೆ — ಏರಿಸಿವೆ. ಹುಂಡಿಗಳ ವಸೂಲಾತಿಗೆ ಶೇ. 100ರಿಂದ 300ರ ವರೆಗೆ, ಚೆಕ್ಕುಗಳ ವಸೂಲಾತಿಗೆ ಶೇ. 100 ರಿಂದ 733ರ ವರೆಗೆ, ಡ್ರಾಫ್ಟ್, ಹುಂಡಿಗಳ ಖರೀದಿಗೆ ಅನುಕ್ರಮವಾಗಿ ಶೇ. 25ರಿಂದ 50 ಮತ್ತು ಶೇ. 125ರಿಂದ 137.5ರ ವರೆಗೆ, ಡ್ರಾಫ್ಟು, ಅಂಚೆ ವರ್ಗಾವಣೆ, ತಂತಿ ವರ್ಗಾವಣೆಗಳಿಗೆ ಶೇ. 100ರಿಂದ 566ರ ವರೆಗೆ—ಹೀಗೆ ಏರಿಕೆಯಾಗಿದೆ. ಸೇವಾ ಶುಲ್ಕಗಳ ದರಗಳನ್ನು ಬ್ಯಾಂಕುಗಳು ಈ ರೀತಿ ಏರಿಸಿವೆ: ಹುಂಡಿಗಳ ಮೇಲೆ ರೂ. 1,000ವರೆಗೆ ರೂ. 5, ರೂ. 3000 ವರೆಗೆ ರೂ. 10, ರೂ. 3,000ದಿಂದ ರೂ. 5,000ದ ವರೆಗೆ ರೂ. 15, ರೂ. 5,000ದಿಂದ ರೂ. 10,000 ವರೆಗೆ ರೂ. 30, ರೂ. 10,000 ದಿಂದ ರೂ. 1 ಲಕ್ಷದವರೆಗೆ ಪ್ರತಿ ರೂ. 1,000ಕ್ಕೆ ರೂ. 4 ತರಗು (ಕಮಿಷನ್) ವಿಧಿಸಲಾಗುತ್ತದೆ. ಚೆಕ್ಕು ವಸೂಲಿ ಶುಲ್ಕ ರೂ. 1,000ದ ವರೆಗೆ ರೂ. 3, ರೂ. 1,000 ರೂ. 5,000: ರೂ. 10; ರೂ. 5,000-ರೂ. 10,000—ರೂ. 20; ರೂ. 10,000-ರೂ. 1 ಲಕ್ಷ: ಪ್ರತಿ ರೂ. 1,000ಕ್ಕೆ ರೂ. 250; ರೂ. 1 ಲಕ್ಷ-ರೂ. 2 ಲಕ್ಷ: ಪ್ರತಿ ರೂ. 1,000ಕ್ಕೆ ರೂ. 2 (ಕನಿಷ್ಠ ರೂ. 250, ಗರಿಷ್ಠ ರೂ. 1,000).

ಲೇಖನಸಾಮಗ್ರಿ, ಖಾತಾ ಪುಸ್ತಕಗಳು, ಸೇವೆ ಎಲ್ಲದರ ವೆಚ್ಚಗಳೂ ಅಧಿಕವಾಗಿರುವುದರಿಂದ ಶುಲ್ಕ ಏರಿಕೆ ಅನಿವಾರ್ಯವೆಂಬುದು ಭಾರತೀಯ ಬ್ಯಾಂಕುಗಳ ಸಂಘದ ವಿವರಣೆ. ಚೆಕ್ಕು ಪುಸ್ತಕಗಳನ್ನು ಉಚಿತವಾಗಿ ಹಂಚಲಾಗುವುದಾದರೂ ಹೊಸದಾಗಿ ನೀಡಲಾಗುತ್ತಿರುವ ಕಾಂತೀಯ ಮಸಿ ಸಂಕೇತಯುಕ್ತ ಚೆಕ್ಕು ಪುಸ್ತಕಗಳ ವೆಚ್ಚ ಮಾಮೂಲಿ ಚೆಕ್ಕು ಪುಸ್ತಕಗಳ ವೆಚ್ಚದ ಹತ್ತರಷ್ಟಾಗುತ್ತದೆ. ಈ ಮೂಲಕ ತೀರುವೆ ವ್ಯವಸ್ಥೆಯನ್ನು ಗಣಕೀಕರಿಸುವುದರಿಂದ ಸ್ಥಳೀಯ ತೀರುವೆಯ ಕಾಲ 48 ಗಂಟೆಗಳಿಂದ 24 ಗಂಟೆಗಳಿಗೆ ಇಳಿಯುತ್ತದೆ. ಈ ಚೆಕ್ಕು ಪುಸ್ತಕಗಳನ್ನು ಗ್ರಾಹಕರು ವ್ಯರ್ಥಮಾಡಬಾರದೆಂಬುದು ಗ್ರಾಹಕರಿಗೆ ಬ್ಯಾಂಕುಗಳ ಕೋರಿಕೆ.

ಬ್ಯಾಂಕ್ ಶುಲ್ಕಗಳ ಏರಿಕೆ ತೀರ ಕಡಿದೆಂಬ ಟೀಕೆ ತೀವ್ರವಾಗಿಯೇ ಇದೆ. ಆದರೆ ಮೊದಲೇ ಲಾಭ ಕುಗ್ಗುತ್ತಿರುವ ಬ್ಯಾಂಕಿಂಗ್ ವಲಯ ತನ್ನ ಶುಲ್ಕಗಳನ್ನು ವೆಚ್ಚಗಳಿಗೆ ಅನುಗುಣವಾಗಿ ನಿಯತಗೊಳಿಸುವುದು ಅಗತ್ಯವೆಂಬ ವಾದವನ್ನು ತಳ್ಳಿಹಾಕುವಂತಿಲ್ಲ. ಬ್ಯಾಂಕಿಂಗ್ ವ್ಯವಹಾರ ಜನಸಾಮಾನ್ಯರಿಗೆ ಬಲು ದುಬಾರಿ ಎನಿಸದಂತೆ ಬ್ಯಾಂಕುಗಳು ಎಚ್ಚರ ವಹಿಸುವುದಂತೂ ಅತ್ಯಗತ್ಯ. ಸೇವೆಯ ಗುಣಮಟ್ಟವನ್ನು ಏರಿಸಲು ವಿಶೇಷ ಕಾಳಜಿ ವಹಿಸಬೇಕಾಗಿದೆ.

## ಹಣ ನೀತಿ ಸುಧಾರಣೆ

ದೇಶದ ಹಣ ವ್ಯವಸ್ಥೆಯನ್ನು ಅಧ್ಯಯನ ಮಾಡಿ, ಹಣ, ಉದ್ದರಿ ಮತ್ತು ರಾಜಕೋಶೀಯ ನೀತಿಗಳ ಪರಸ್ಪರ ಸಂಬಂಧವನ್ನು ಪರಿಶೀಲಿಸಬೇಕೆಂದು 1982ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನಿಂದ ನೇಮಕಗೊಂಡಿದ್ದ ಸುಖಮೊಯ ಚಕ್ರವರ್ತಿ ಸಮಿತಿ ತನ್ನ ವರದಿಯನ್ನು ಕಳೆದ ವರ್ಷದ ಏಪ್ರಿಲ್ ತಿಂಗಳಿನಲ್ಲೇ ಒಪ್ಪಿಸಿತ್ತು. ಆ ವರದಿ ಪ್ರಕಟವಾದ್ದು ಕಳೆದ ನವೆಂಬರಿನಷ್ಟು ತಡವಾಗಿ. ಇದು ಹೇಗೂ ಇರಲಿ, ಈ ಸಮಿತಿಯ ಕಾಣ್ಕೆ ಹಾಗೂ ಶಿಫಾರಸುಗಳು ಅತ್ಯಂತ ಮಹತ್ವಪೂರ್ಣವಾದವು ಎಂಬುದರಲ್ಲಿ ಸಂಶಯವಿಲ್ಲ. ದೇಶದಲ್ಲಿ ಬೆಲೆಗಳ ಸ್ಥಿರತೆ ಸಾಧಿಸಬೇಕಾದರೆ ಹಣನೀತಿಗೆ ಪ್ರಧಾನ ಪಾತ್ರ ನೀಡುವುದು ಅಗತ್ಯವೆಂದು ಸಮಿತಿ ಹೇಳಿದೆ. ಸರ್ಕಾರಕ್ಕೆ ರಿಸರ್ವ್ ಬ್ಯಾಂಕ್ ನೀಡಬೇಕಾಗಿರುವ ಉದ್ದರಿಯಿಂದಾಗಿ ಅಸ್ಥಿರ ಪರಿಸ್ಥಿತಿ ಉಂಟಾಗಿದೆಯೆಂಬುದು ಸಮಿತಿಯ ಇನ್ನೊಂದು ಅಭಿಪ್ರಾಯ. ಸರ್ಕಾರ ಹಾಗೂ ರಿಸರ್ವ್ ಬ್ಯಾಂಕಿನ ನಡುವೆ ತಕ್ಕಮಟ್ಟಿನ ಹೊಂದಾಣಿಕೆ,ಸಂಯೋಜನೆ ಅಗತ್ಯವೆಂದು ಅದು ಭಾವಿಸುತ್ತದೆ. ಈಗ

ನೀತಿಯನ್ನು ರೂಪಿಸುತ್ತಿರುವುದು ಸರ್ಕಾರ. ಇದಕ್ಕನುಗುಣವಾಗಿ ನಗದು ಮೀಸಲು ಅನುಪಾತವೇ ಮುಂತಾದ ಸಾಧನಗಳ ಮೂಲಕ ಪರಿಸ್ಥಿತಿಯನ್ನು ಹತೋಟಿಗೆ ತರಲು ಯತ್ನಿಸುವುದಷ್ಟೇ ರಿಸರ್ವ್ ಬ್ಯಾಂಕಿನ ಕೆಲಸ. ನೀತಿರೂಪಣೆಯಲ್ಲಿ ಅದಕ್ಕೆ ಪಾತ್ರವಿಲ್ಲ. ಇದು ಸರಿಯಲ್ಲ ಎಂದು ಸಮಿತಿ ಹೇಳಿರುವುದು ಗಮನಿಸಬೇಕಾದ ಸಂಗತಿ.

ಬಡ್ಡಿ ದರಗಳಿಗೂ ಹಣದುಬ್ಬರದ ದರಕ್ಕೂ ಸಾಂಗತ್ಯ ಏರ್ಪಡಿಸಬೇಕು ಎಂದು ಸುಖಮೊಯ ಚಕ್ರವರ್ತಿ ಸಮಿತಿ ಸೂಚಿಸಿದೆ. ಆರ್ಥಿಕ ಬೆಳವಣಿಗೆಗೆ ತಕ್ಕಂತೆ ಹಣದ ಪೂರೈಕೆಯನ್ನು ನಿಯಂತ್ರಿಸಬೇಕು. ಸರ್ಕಾರ ಕೊರತೆ ಆಯುವ್ಯಯ ನೀತಿಯನ್ನು ತೊರೆದು ತನ್ನ ಖರ್ಚಿಗೆ ಅಗತ್ಯವಾದ ಹಣವನ್ನು ಮಾರುಕಟ್ಟೆಯಿಂದ ಸಾಲ ಎತ್ತಬೇಕು ಎಂಬುದು ಕೂಡ ಮಹತ್ವದ ಸಲಹೆಯೇ. ಈಚೆಗೆ ಸರ್ಕಾರ ಸಾಲ ಎತ್ತುತ್ತಿರುವ ರೀತಿಯೂ ಪ್ರಚ್ಛನ್ನ ಕೊರತೆ ಆಯವ್ಯಯವೇ. ಉದಾಹರಣೆಗೆ 1980-85ರ ಅವಧಿಯಲ್ಲಿ ಸರ್ಕಾರ ಎತ್ತಿದ ಒಟ್ಟು ಸಾಲ ರೂ. 17,400 ಕೋಟಿ. ಇದರಲ್ಲಿ ರೂ. 5,900 ಕೋಟಿಯನ್ನು ರಿಸರ್ವ್ ಬ್ಯಾಂಕೇ ಸಲ್ಲಿಸಬೇಕಾಯಿತು. ಇದು ಸರ್ಕಾರದ ಈ ಅವಧಿಯ ರೂ. 14,700 ಕೋಟಿಯ ಕೊರತೆ ಬಜೆಟ್ಟಿನ ಹಣದ ಜೊತೆಗೆ ರಿಸರ್ವ್ ಬ್ಯಾಂಕ್ ಹೊರಬೇಕಾಗಿ ಬಂದ ಹಣ. ಎಂದರೆ ಒಟ್ಟು ರೂ. 20,600 ಕೋಟಿ ಕೊರತೆ ಹಣಕಾಸು ಎನ್ನಬಹುದು. ಸುದೈವದಿಂದ ದೇಶದಲ್ಲಿ ಆಹಾರೋತ್ಪನ್ನ ಹಾಗೂ ಕೈಗಾರಿಕೋತ್ಪನ್ನ ತಕ್ಕಮಟ್ಟಿಗೆ ಅನುಕೂಲವಾಗಿದ್ದದ್ದರಿಂದ ಹಣದುಬ್ಬರ ಮಿತಿಮೀರಿ ಹೋಗಲಿಲ್ಲ. ಸಾರ್ವಜನಿಕ ಸಾಲಗಳನ್ನು ಹಣದ ರೂಪದಲ್ಲೇ ಪಡೆಯುವ ಕ್ರಮ ಬರಬೇಕು. ಅಷ್ಟಟ ಕೊರತೆ ಆಯವ್ಯಯದ ಪತ್ರವನ್ನು ಪೂರ್ವಭಾವಿಯಾಗಿಯೇ ಸಮಾಲೋಚನೆಯಿಂದ ನಿರ್ಧರಿಸಬೇಕು ಎಂಬ ಸಲಹೆ ಸ್ವಾಗತಾರ್ಹ.

ಬ್ಯಾಂಕ್ ಠೇವಣಿಗಳ ಬಡ್ಡಿ ದರಗಳ ನಿರ್ವಹಣೆ, ಸಾಲ ನೀಡಿಕೆಯ ಬಡ್ಡಿ ದರಗಳ ಸಂರಚನೆ–ಇವನ್ನೆಲ್ಲ ಸುಖಮೊಯ ಚಕ್ರವರ್ತಿ ಸಮಿತಿ ಟೀಕಿಸಿದೆ. ಈ ವಿಚಾರದಲ್ಲಿ ಅತಿಯಾದ ಕೈವಾಡದಿಂದಾಗಿ ಬಡ್ಡಿ ದರಗಳು ಗಡುಸಾಗಿವೆ. ನಾನಾ ವಲಯಗಳಿಗೆ ಸಹಾಯಧನ ನೀಡುವುದು ಅಗತ್ಯವಾಗಿದೆ. ಬ್ಯಾಂಕುಗಳ ಲಾಭಪ್ರದತೆ ಕುಗ್ಗಿದೆ. ನಿಧಿಗಳನ್ನು ಅತ್ಯಂತ ಉತ್ಪಾದಕ ಮಾರ್ಗಗಳಲ್ಲಿ ತೊಡಗಿಸುವ ವರ್ಗಗಳ ಸಾಲಗಾರರ ಹೊರೆ ಅಧಿಕವಾಗಿದೆ. ಆದ್ದರಿಂದ ಬಡ್ಡಿ ದರಗಳಿಗೆ ಹೊಸ ಸೂತ್ರಗಳನ್ನು ರೂಪಿಸಬೇಕು. ಹಣಕಾಸಿನ ಹಾಗೂ ಪತ್ತಿನ ಸಂಸ್ಥೆಗಳ ಹೊಂದಾವಣೆಯಾಗಬೇಕು. ಗರಿಷ್ಠ ಠೇವಣಿ ದರಕ್ಕೂ ಕನಿಷ್ಠ ಸಾಲ ನೀಡಿಕೆ ದರಕ್ಕೂ ಕೊನೆಯ ಪಕ್ಷ ಶೇ. 3ರಷ್ಟು ಹರವು ಇರಬೇಕು. ರಿಯಾಯಿತಿ ಬಡ್ಡಿ ದರದ ಸಾಲಗಳನ್ನು ಆದ್ಯತಾ ವಲಯದ ಕೆಲವೇ ಗುಂಪುಗಳಿಗೆ ಸೀಮಿತಗೊಳಿಸಬೇಕು. ನಗದು ಉದ್ದರಿ ವ್ಯವಸ್ಥೆಯನ್ನು ನಿರುತ್ತೇಜಿಸಬೇಕು. ಸಾಲ ಮತ್ತು ಹುಂಡಿ ವಟಾವಣೆಯ ಮೂಲಕ ಉದ್ದರಿ ನೀಡುವ ಪದ್ಧತಿ ಬರಬೇಕು. ಇವು ಸಮಿತಿಯ ಕೆಲವು ಮುಖ್ಯ ಸಲಹೆಗಳು. ಸರ್ಕಾರವೂ ಬ್ಯಾಂಕುಗಳೂ ಹಣ ಪ್ರಾಧಿಕಾರಿಗಳೂ ಸಮಿತಿಯ ವರದಿಯನ್ನು ಗಂಭೀರವಾಗಿ ಅಧ್ಯಯಿಸಿ ಯುಕ್ತ ಬದಲಾವಣೆಗಳನ್ನು ಜಾರಿಗೆ ತರಬೇಕಾಗಿದೆ.

● ● ●

**ಬ್ಯಾಂಕುಗಳ ಬಂಡವಾಳಗಳ ಏರಿಕೆ**

ಭಾರತದ ಒಂಬತ್ತು ಬ್ಯಾಂಕುಗಳು ತಮ್ಮ ಬಂಡವಾಳ ಮತ್ತು ಅವುಗಳ ಠೇವಣಿ ಹೊಣೆಯ ಅನುಪಾತವನ್ನು ಹೆಚ್ಚಿಸುವ ದೃಷ್ಟಿಯಿಂದ, ವಿದೇಶಗಳಲ್ಲಿ ಇವು ವಿದೇಶಿ ಚಲಾರ್ಥ ಸಾಲಗಳನ್ನು ಎತ್ತುವುದಕ್ಕೆ ಅನುಕೂಲವಾಗುವಂತೆ ಭಾರತೀಯ ಬ್ಯಾಂಕುಗಳನ್ನು ಪ್ರಕ್ಷೇಪಿಸುವ ದೃಷ್ಟಿಯಿಂದ ಹಾಗೂ ಈ ಬ್ಯಾಂಕುಗಳ ವಿದೇಶ ವ್ಯವಹಾರಗಳ ಪ್ರಾಮುಖ್ಯ ದೃಷ್ಟಿಯಿಂದ ತಮ್ಮ ಪಾವತಿಯಾದ ಬಂಡವಾಳಗಳನ್ನು ಈ ರೀತಿ ಹೆಚ್ಚಿಸಿವೆ (ಹೆಚ್ಚಿಸಿದ ಬಂಡವಾಳಗಳನ್ನು ಕೋಟಿ ರೂಗಳಲ್ಲಿ ಆಯಾ ಬ್ಯಾಂಕುಗಳ ಹೆಸರುಗಳ ಮುಂದೆ ಆವರಣಗಳೊಳಗೆ ಸೂಚಿಸಲಾಗಿದೆ) : 1. ಬ್ಯಾಂಕ್ ಆಫ್ ಇಂಡಿಯ (42), 2. ಬ್ಯಾಂಕ್ ಆಫ್ ಬರೋಡ (37), 3. ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ (34), 4. ಪಂಜಾಬ್ ನ್ಯಾಷನಲ್ ಬ್ಯಾಂಕ್ (33), 5. ಇಂಡಿಯನ್ ಓವರಸೀಸ್ ಬ್ಯಾಂಕ್ (18), 6. ಕೆನರಾ ಬ್ಯಾಂಕ್ (14.50), 7. ಸಿಂಡಿಕೇಟ್ ಬ್ಯಾಂಕ್ (18), 8. ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್ (ಯೂಕೊ ಬ್ಯಾಂಕ್) (17.50) 9. ಇಂಡಿಯನ್ ಬ್ಯಾಂಕ್ (12)

# ವಿಶ್ವಕನ್ನಡ ಸಮ್ಮೇಳನ: ಬ್ಯಾಂಕಿಂಗ್ ವಿಚಾರ ಸಂಕಿರಣ

**ಸುಬ್ರಹ್ಮಣ್ಯ ಗಲಗಲಿ**

ಕಳೆದ ವರ್ಷ ಡಿಸೆಂಬರ್ 15, 16, 17ರಂದು ಮೈಸೂರಿನಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಸಮನ್ವಯ ಸಮಿತಿಯ ಸಂಯುಕ್ತ ಆಶ್ರಯದಲ್ಲಿ 17ನೆಯ ದಿನಾಂಕದಂದು ಏರ್ಪಡಿಸಿದ್ದ 'ಕರ್ನಾಟಕದಲ್ಲಿ ಬ್ಯಾಂಕಿಂಗ್' ಎಂಬ ವಿಚಾರಸಂಕಿರಣದ ಒಂದು ವರದಿ

ಇದೇ 15, 16, 17ರಂದು ಮೈಸೂರಿನಲ್ಲಿ ವಿಶ್ವ ಕನ್ನಡ ಸಮ್ಮೇಳನ ನಡೆಯಿತು. ಅದರ ಪರ ಹಾಗೂ ವಿರೋಧಗಳ ವಿಚಾರವೇನೇ ಇದ್ದರೂ ಅಲ್ಲಿ ಕೆಲವು ಮಹತ್ವದ ವಿಚಾರಸಂಕಿರಣಗಳು ನಡೆದು ಆಸಕ್ತರ ವಿಚಾರ ಕೆರಳಿಸಿದುವು. ಅಂಥವುಗಳಲ್ಲಿ 17ನೆಯ ದಿನಾಂಕದಂದು ಮೈಸೂರಿನ ಶತಮಾನೋತ್ಸವ ಭವನದಲ್ಲಿ ಬೆಳಗ್ಗೆ ಎಚ್ಚೆಸ್ಕೆ ಅವರ ಅಧ್ಯಕ್ಷತೆಯಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ 'ಸಮನ್ವಯ ಸಮಿತಿ' ಬೆಂಗಳೂರು ಇವರ ಮೂಲಕ ನಡೆದ 'ಬ್ಯಾಂಕಿಂಗ್ ವಿಚಾರಸಂಕಿರಣ' ಅನೇಕ ರೀತಿಗಳಲ್ಲಿ ಗಮನಾರ್ಹವಾದ್ದು. ಉಳಿದ ವಿಚಾರಸಂಕಿರಣಗಳಲ್ಲಿ ಕುತೂಹಲದಿಂದಲೋ, ತಮ್ಮ ನೆಚ್ಚಿನ ಸಾಹಿತಿಗಳನ್ನು ನೋಡಲೆಂದೋ, ಇನ್ನಿತರ ಕಾರಣಗಳಿಗಾಗಿಯೋ ಜನ ಸೇರುತ್ತಿದ್ದರೆ ಈ ಸಂಕಿರಣದಲ್ಲಿ ಸೇರಿದವರು ಸಾಮಾನ್ಯವಾಗಿ ಬ್ಯಾಂಕ್ ಉದ್ಯೋಗಿಗಳು. ಇಲ್ಲಿ ಕುತೂಹಲಕ್ಕಿಂತ ಕರ್ನಾಟಕದ ಬ್ಯಾಂಕುಗಳಲ್ಲಿ ಕನ್ನಡದ ಬಳಕೆಯ ಬಗ್ಗೆ ಇತ್ಯಾತ್ಮಕ ಧೋರಣೆ ಸಭಿಕರಲ್ಲಿ ಎದ್ದುಕಾಣುತ್ತಿತ್ತು. ಯಾವ ಸಂಕಿರಣದಲ್ಲಿಯೂ ಇಲ್ಲದ, ಉಪನ್ಯಾಸಕ ಹಾಗೂ ಸಭಿಕರ ನಡುವೆ ನಡೆದ ಕ್ರಿಯಾತ್ಮಕ ಚರ್ಚೆ ಬಹು ಮಹತ್ವದ್ದು. ಬಹುಶಃ ರಾಜಕಾರಣಿಗಳಿಲ್ಲದ್ದರಿಂದ ಬರುವವರನ್ನು ಅಸಭ್ಯವಾಗಿ ನೂಕುವ ಪೋಲಿಸರು ಇಲ್ಲಿರಲಿಲ್ಲ.

## ಪ್ರಬಂಧಗಳು

ಡಾ. ಎನ್. ಕೆ. ತಿಂಗಳಾಯರು ರಾಜ್ಯದಲ್ಲಿ ಬ್ಯಾಂಕಿಂಗ್ ಬೆಳವಣಿಗೆಯ ಬಗೆಗೆ ಅಂಕಿ-ಅಂಶಗಳ ಮೂಲಕ ವಿಶದವಾಗಿ ತಿಳಿಸಿದರು. 'ಇಲ್ಲಿಯವರೆಗೆ ಕರ್ನಾಟಕದಲ್ಲಿ 75 ಬ್ಯಾಂಕುಗಳು ಹುಟ್ಟಿವೆ. ಅವುಗಳಲ್ಲಿ ಈಗ ಉಳಿದಿರುವವು ಏಳು ಮಾತ್ರ. ದೇಶದ 28 ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಐದು ಕರ್ನಾಟಕದಲ್ಲಿವೆ. ದೇಶದಲ್ಲಿಯೇ ದಕ್ಷಿಣ ಕನ್ನಡ ಜಿಲ್ಲೆ ಬ್ಯಾಂಕ್ ಉದ್ದಿಮೆಯಲ್ಲಿ ಅಗ್ರಸ್ಥಾನದಲ್ಲಿದೆ. ಪಿಗ್ಮಿ ಯೋಜನೆ ಹುಟ್ಟಿದ್ದೇ ಸಿಂಡಿಕೇಟ್ ಬ್ಯಾಂಕಿನಲ್ಲಿ. ಕರ್ನಾಟಕದಲ್ಲಿ ಸರಾಸರಿ 9,800 ಜನಕ್ಕೆ ಒಂದು ಬ್ಯಾಂಕ್ ಶಾಖೆಯಿದೆ (ದೇಶದಲ್ಲಿ ಸರಾಸರಿ 16,000 ಜನಕ್ಕೆ ಒಂದು ಬ್ಯಾಂಕ್). ಅಲ್ಲದೆ ಗ್ರಾಮಾಂತರ ಪ್ರದೇಶದಲ್ಲಿ 13 ಗ್ರಾಮೀಣ ಬ್ಯಾಂಕುಗಳಿವೆ. ರಿಸರ್ವ್ ಬ್ಯಾಂಕು 1985 ಮಾರ್ಚಿ 31ರ ಹೊತ್ತಿಗೆ ಬ್ಯಾಂಕುಗಳ ಆದ್ಯತಾಕ್ಷೇತ್ರಗಳ ಸಾಲ 40% ಆಗಿರಲೇಬೇಕೆಂದು ಕಡ್ಡಾಯ ಮಾಡಿತ್ತು. ಕರ್ನಾಟಕದ ಬ್ಯಾಂಕುಗಳು ಆ ಕ್ಷೇತ್ರದ ಸಾಲಗಳಿಗೆ ಕೊಟ್ಟ ಒಟ್ಟು ಮೊಬಲಗು 51%.' ಇದು ಅವರ ಉಪನ್ಯಾಸದ ಸಾರ.

ಅನಂತರ ಮಾತಾಡಿದ ಹಾ. ಗು. ಬಾಲಗೋಪಾಲರು 'ತ್ರಿಭಾಷಾ ಸೂತ್ರ ಹಾಗೂ ಬ್ಯಾಂಕಿಂಗ್' ಬಗ್ಗೆ ವಿವರಿಸಿದರು. 'ಗ್ರಾಹಕ ಬ್ಯಾಂಕಿನ ಕೇಂದ್ರ ಬಿಂದು. ಗ್ರಾಹಕ-ಬ್ಯಾಂಕರ್ ಸಂಬಂಧ ಸುಧಾರಿಸಿ ಉಪಯುಕ್ತ ಸೇವೆ ಬ್ಯಾಂಕುಗಳಿಂದ ಸಲ್ಲಬೇಕಾದರೆ ಗ್ರಾಹಕನ ಭಾಷೆಯಲ್ಲಿಯೇ ಬ್ಯಾಂಕುಗಳ ನಿತ್ಯವ್ಯವಹಾರ ನಡೆಯಬೇಕು. ಆಂತರಿಕವ್ಯವಹಾರ ಸದ್ಯ ಹಿಂದಿ-ಇಂಗ್ಲಿಷುಗಳಲ್ಲಿ ನಡೆಯಲಡ್ಡಿಯಿಲ್ಲ. ಆದರೆ ಸಾರ್ವಜನಿಕ ಸಂಪರ್ಕ ಬರುವ ಎಲ್ಲ ವ್ಯವಹಾರಗಳು (ಅರ್ಜಿ ಸ್ವೀಕರಿಸುವದು, ಡ್ರಾಫ್ಟ್, ಪಾವತಿ ಆದೇಶ ಹಾಗೂ ಠೇವಣಾತಿ ರಸೀತಿ ಬರೆಯುವದು, ಬ್ಯಾಂಕಿನ ರಬ್ಬರ್‌ಮೊಹರುಗಳ ಉಪಯೋಗ ಇತ್ಯಾದಿ) ಕನ್ನಡದಲ್ಲಿಯೇ ನೀಡಬೇಕು. ಇದಕ್ಕಾಗಿ ಬ್ಯಾಂಕ್ ಸಿಬ್ಬಂದಿಗೆ ಯೋಗ್ಯ ತರಬೇತಿ ನಡೆಯಬೇಕು. ಇದಕ್ಕಾಗಿ ಆಯಾ ಬ್ಯಾಂಕುಗಳ ಕೇಂದ್ರ ಕಚೇರಿಗಳಲ್ಲಿ ಪ್ರತ್ಯೇಕ ವಿಭಾಗ ತೆರೆಯಬೇಕು.'

ಕೊನೆಯದಾಗಿ ಮಾತಾಡಿದ ಗೋವಿಂದಮೂರ್ತಿ ದೇಸಾಯಿಯವರು 'ಕರ್ನಾಟಕದ ಬ್ಯಾಂಕ್ ಉದ್ಯಮ—ಇಂದು, ನಾಳೆ' ಬಗ್ಗೆ ವಿವರಿಸಿದರು. 'ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಬ್ಯಾಂಕುಗಳ ಪಾತ್ರ ಹಿರಿದು. ಬ್ಯಾಂಕ್ ಸಂಪರ್ಕಕ್ಕೆ ಬರದ ವ್ಯಕ್ತಿಯೇ ಇಲ್ಲ. ಬ್ಯಾಂಕುಗಳ ಇಂದಿನ ಗುರಿ ಸಮಾಜದ ಆರ್ಥಿಕ ಉನ್ನತಿಗೆ ಸಹಾಯ ಮಾಡುವುದು, ದುರ್ಬಲ ವರ್ಗದವರಿಗೆ ಆದ್ಯತೆ ಕೊಡುವುದು. ಇಂದು ಬ್ಯಾಂಕುಗಳ ಮೇಲೆ ರಾಜಕೀಯ ಒತ್ತಡ ಬಲವಾಗುತ್ತಿರುವುದರಿಂದ ಸಾಲಗಳ ಗುಣಾತ್ಮಕ ಮಟ್ಟ ಕುಸಿಯುತ್ತಿದೆ, ಕರೆದು ಸಾಲ ಕೊಡುವ ಪದ್ಧತಿ ಬಹುಶಃ ಭಾರತ ಬಿಟ್ಟರೆ ಬೇರೆಲ್ಲೂ ಇಲ್ಲ. ಸಣ್ಣ ಉದ್ದಿಮೆ ಹಾಗೂ ವ್ಯವಸಾಯ ಕ್ಷೇತ್ರಗಳಿಗೆ ಕೊಟ್ಟ ಸಾಲಗಳ ಮರುಪಾವತಿ ದುರ್ಲಭವಾಗುತ್ತಿದೆ. ಮರುಪಾವತಿಯ ಪ್ರಮಾಣ ಇಂದು 53% ಇದೆ. ಇದರಿಂದ ಲಾಭಾಂಶ ಕಡಿಮೆಯಾಗಿ ಬ್ಯಾಂಕಿನ ಕಾರ್ಯದಕ್ಷತೆಯ ಮೇಲೆ ಹೊಡೆತ ಬೀಳುತ್ತಿದೆ. ಕೇವಲ ಸಂಖ್ಯಾಬಲದಿಂದ ಬ್ಯಾಂಕಿಂಗ್ ಪ್ರಗತಿ ಸಾಧ್ಯವಿಲ್ಲ. ಇತರ ರಾಷ್ಟ್ರೀಕೃತ ಉದ್ದಿಮೆಗಳಂತೆ ಬ್ಯಾಂಕುಗಳು ನಷ್ಟದ ಮೇಲೆ ನಡೆಯುವುದು ಸಾಧ್ಯವೂ ಇಲ್ಲ, ಅದಕ್ಕೆ ಅವಕಾಶವೂ ಇಲ್ಲ.'

ಕೊನೆಗೆ ಎಚ್ಚೆಸ್ಕೆಯವರು 'ಕರ್ನಾಟಕದ ಬ್ಯಾಂಕುಗಳಲ್ಲಿ ಗ್ರಾಮನಗರ ಭೇದವಿಲ್ಲದೆ ಕನ್ನಡ ಬಳಕೆ ಕಡ್ಡಾಯವಾಗಬೇಕು. ಬ್ಯಾಂಕ್ ಉದ್ಯೋಗಿಗಳು ಕೀಳರಿಮೆ ಬಿಟ್ಟು ಇದಕ್ಕೆ ಮುಂದಾಗಬೇಕು. ಶಬ್ದ ಸಂಪತ್ತಿಲ್ಲ ಎಂಬ ಪೊಳ್ಳುವಾದ ಬಿಟ್ಟು, ಪ್ರಚಲಿತವಿರುವ ಇಂಗ್ಲಿಷ್ ಪದಗಳನ್ನೇ ಬಳಸುತ್ತ (ಬ್ಯಾಂಕ್, ಡ್ರಾಫ್ಟ್, ಚೆಕ್ ಇತ್ಯಾದಿ) ಇನ್ನಿತರ ಶಬ್ದಗಳಿಗೆ ಕನ್ನಡದ ಸಾಮಾನ್ಯ ಪದಗಳನ್ನು, ಕನ್ನಡದಲ್ಲಿ ಬಳಕೆಯಲ್ಲಿರುವ, ಹಿಂದಿ ಮತ್ತಿತರ ಶಬ್ದಗಳನ್ನು ಬಳಸಬೇಕು. ಈ ದೃಷ್ಟಿಯಿಂದ ಸಮನ್ವಯ ಸಮಿತಿಯವರು ಹೊರತಂದಿರುವ ಬ್ಯಾಂಕಿಂಗ್ ನಿಘಂಟು ಉಪಯುಕ್ತವಾಗಿದೆ. ಇದರಲ್ಲಿ ಸಿಬ್ಬಂದಿಗೆ ತರಬೇತಿ ನೀಡಬೇಕು,' ಎಂದರು. [ಮುಂದಿನ ಪುಟಕ್ಕೆ]

---

ಸುಬ್ರಹ್ಮಣ್ಯ ಗಲಗಲಿ, ಕರ್ನಾಟಕ ಬ್ಯಾಂಕ್, ಹೊಂಬೆಗೌಡ ನಗರ ಶಾಖೆ, ಬೆಂಗಳೂರು 560 027

# ಕರ್ನಾಟಕದ ಬ್ಯಾಂಕ್ ಉದ್ಯಮ: ಇಂದು-ಮುಂದು

**ಗೋವಿಂದಮೂರ್ತಿ ದೇಸಾಯಿ**

ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಮೈಸೂರಿನಲ್ಲಿ ಕಳೆದ ಡಿಸೆಂಬರ್ 17ರಂದು ಏರ್ಪಡಿಸಿದ್ದ 'ಕರ್ನಾಟಕದಲ್ಲಿ ಬ್ಯಾಂಕಿಂಗ್' ವಿಚಾರಸಂಕಿರಣದಲ್ಲಿ ಮಂಡಿಸಲಾದ ಒಂದು ಪ್ರಬಂಧ

ರಾಷ್ಟ್ರದ ಮತ್ತು ರಾಜ್ಯಗಳ ಆರ್ಥಿಕ ಮತ್ತು ಸಾಮಾಜಿಕ ರಂಗಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಇಂದು ಅತ್ಯಂತ ಮಹತ್ವದ ಪಾತ್ರವನ್ನಾಡುತ್ತವೆ. ಎರಡು ದಶಕಗಳಷ್ಟು ಹಿಂದೆ ವಾಣಿಜ್ಯ ಬ್ಯಾಂಕುಗಳು ವ್ಯಾಪಾರ ಮನೋವೃತ್ತಿಯನ್ನು ಬೆಳೆಸಿಕೊಂಡು, ವಣಿಕರಿಗೆ ಮತ್ತು ಟಾಟಾ-ಬಾಟಾರಂತಹ ಅತಿದೊಡ್ಡ ಉದ್ದಿಮೆದಾರರಿಗೆ ಸಾಲಗಳನ್ನು ಒದಗಿಸಿ, ತಮಗೆ ಇಷ್ಟಬಂದವರಿಗೆ ಪತ್ತನ್ನು ಕೊಡುತ್ತಿದ್ದುವು. ಆಗ ಬ್ಯಾಂಕುಗಳಿಗೆ ಅಭಿವೃದ್ಧಿಗಿಂತ ಲಾಭದ ಮೇಲೆ ಕಣ್ಣಿತ್ತು. ಅವು ಔದ್ಯೋಗಿಕ ಬೆಳವಣಿಗೆಯತ್ತ ದೃಷ್ಟಿಯನ್ನು ಹರಿಸುತ್ತಿದ್ದರೂ, ವ್ಯಾಪಾರಿಗಳಿಗೇ ಸಾಲವನ್ನೀಯುತ್ತಿದ್ದುವು. 1962-63ರಲ್ಲಿ ಕೇಂದ್ರ ಸರಕಾರ ಬ್ಯಾಂಕುಗಳ ಮೇಲೆ ಸಾಮಾಜಿಕ ಹತೋಟಿಯನ್ನು ಹೊಂದಲು ನಿರ್ಧರಿಸಿದಂದಿನಿಂದ ಸಣ್ಣ ಪ್ರಮಾಣದ ಔದ್ಯೋಗಿಕ ಬೆಳವಣಿಗೆ, ನೇರವಾಗಿ ಸಾಲವನ್ನೀಯುವ ವ್ಯವಸಾಯಾಭಿವೃದ್ಧಿ, ಸಮಾಜ ಪುನರ್ನಿರ್ಮಾಣದಂತಹ ರಾಷ್ಟ್ರಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ಬ್ಯಾಂಕುಗಳು ತಮ್ಮನ್ನೇ ತಾವು ತೊಡಗಿಸಿಕೊಳ್ಳಲು ಸಜ್ಜಾಗಹತ್ತಿದುವು. ಹಸಿವೆ, ದಾರಿದ್ರ್ಯ, ನಿರುದ್ಯೋಗಗಳ ನಿರ್ಮೂಲನೆಗೆ ಸರಕಾರ ರಚಿಸಿದ 20 ಅಂಶಗಳ ಆರ್ಥಿಕ ಕಾರ್ಯಕ್ರಮದಲ್ಲಿ ಬ್ಯಾಂಕುಗಳು 12 ಅಂಶಗಳನ್ನು ನೇರವಾಗಿ ಅನುಷ್ಠಾನವನ್ನು ಮಾಡುವಂತೆ ಅವುಗಳ ಮೇಲೆ ಜವಾಬ್ದಾರಿಯನ್ನು ಹೊರಿಸಲಾಗಿದೆ. ಇದರಿಂದ ಬ್ಯಾಂಕುಗಳ ಸಾಮಾಜಿಕ ಹೊಣೆ ದಿನದಿನಕ್ಕೂ ಹೆಚ್ಚಾಗುತ್ತ ನಡೆದಿದೆ.

ಮೊಟ್ಟಮೊದಲು ರಾಷ್ಟ್ರೀಕರಣವಾದ ಬ್ಯಾಂಕು ರಿಸರ್ವ್ ಬ್ಯಾಂಕು. ಅನಂತರ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಮತ್ತು ಸಂಸ್ಥಾನಗಳಲ್ಲಿದ್ದ ಸ್ಟೇಟ್ ಬ್ಯಾಂಕಿನ ಕುಟುಂಬಕ್ಕೆ ಸೇರಿದ ಏಳು ಬ್ಯಾಂಕುಗಳು. ಅನಂತರ 14 ಬ್ಯಾಂಕುಗಳು, ಇತ್ತೀಚಿನ 3 ವರುಷಗಳಲ್ಲಿ ಮತ್ತಾರು ಬ್ಯಾಂಕುಗಳು. ಹೀಗೆ, 28 ಬ್ಯಾಂಕುಗಳು ದೇಶದ ಪ್ರತಿ ಶತ ಎಂಬತ್ತರಷ್ಟು ಬ್ಯಾಂಕ್ ಉದ್ದಿಮೆಯನ್ನು ತಮ್ಮ ಕೈಗೆ ತೆಗೆದುಕೊಂಡಿವೆ. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ನಾಲ್ಕು ಕರ್ನಾಟಕದ ಬ್ಯಾಂಕುಗಳು ಇವೆಯೆಂದರೆ, ಕರ್ನಾಟಕದಲ್ಲಿ ಬ್ಯಾಂಕ್ ಉದ್ದಿಮೆಗೆ ಇರುವ ನೆಲೆಗಟ್ಟು ಮತ್ತು ಅಪಾರ ಅನುಭವದ ಕಲ್ಪನೆ ಬರದಿರದು. ಕರ್ನಾಟಕದಲ್ಲಿ ಬ್ಯಾಂಕುಗಳು ಬಂದು ಒಂದು ಶತಮಾನವಾಗಿರಬಹುದೇನೋ! ಅಷ್ಟು ಹಳೆಯದಾದ ಬ್ಯಾಂಕಿಂಗ್ ಅನುಭವ ನಮಗಿದೆ.

ಗೋವಿಂದಮೂರ್ತಿ ದೇಸಾಯಿ, ವ್ಯವಸ್ಥಾಪಕರು (ಆಯೋಜನೆ), ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು 560 001

---

(ಹಿಂದಿನ ಪುಟದಿಂದ)

ನಿರ್ಣಯಗಳು

ಉಪನ್ಯಾಸಗಳ ಅನಂತರ ಸಭಿಕರು ಉಪನ್ಯಾಸಕರಿಗೆ ಪ್ರಶ್ನೆ ಬರೆದು ಕಳಿಸಲು ಸೂಚಿಸಲಾಯಿತು. ಒಬ್ಬೊಬ್ಬ ಉಪನ್ಯಾಸಕರಿಗೂ ಸುಮಾರು ಪ್ರಶ್ನೆಗಳು ಬಂದುವು. ಅವರು ಆದಷ್ಟು ಸಮರ್ಪಕವಾಗಿ ಉತ್ತರಿಸಿದರು. 'ಕೇಂದ್ರ ಸರಕಾರ ಹಿಂದಿ ಬಳಕೆಯನ್ನು ಕಡ್ಡಾಯಗೊಳಿಸಿದಂತೆ ಕನ್ನಡದ ಬಳಕೆಯನ್ನೂ ಕಡ್ಡಾಯಗೊಳಿಸಬೇಕು. ಇದು ಬರೀ ಚರ್ಚಾತ್ಮಕ ವಿಷಯವಾಗಿ ನಿಲ್ಲದೆ ಇದರ ಬಗ್ಗೆ ದೃಢ ಹಾಗೂ ಕಾರ್ಯಶೀಲ ನಿರ್ಣಯಗಳನ್ನು ತತ್‌ಕ್ಷಣ ಜಾರಿಗೊಳಿಸಬೇಕು. ಕನ್ನಡ ಬಳಸಬಹುದು, ಅದು ಆಯಾ ಬ್ಯಾಂಕುಗಳಿಗೆ ಸೇರಿದ್ದು—ಎಂಬ ಹಾರಿಕೆಯ ಉತ್ತರ ಬಿಟ್ಟು ಅದರ ಬಗ್ಗೆ ಕನ್ನಡ ಆಡಳಿತಮಾಧ್ಯಮ ವರ್ಷವಾದ ಈಗ ಸ್ಪಷ್ಟ ನಿರ್ಣಯ ಕೈಗೊಳ್ಳಬೇಕು' ಎಂಬುದು ಸಭೆಯ ಅಭಿಪ್ರಾಯವಾಗಿತ್ತು. ಕೆಲವರು ಕೆಲವು ಬ್ಯಾಂಕುಗಳಲ್ಲಿ ಕನ್ನಡ ಬಳಸುವವರ ಮೇಲೆ ನಡೆಯುತ್ತಿರುವ ಅನ್ಯಾಯಗಳನ್ನು ವಿವರಿಸಿದರು. ಕೊನೆಗೆ 'ಬ್ಯಾಂಕುಗಳಲ್ಲಿ ಕನ್ನಡದ ಬಳಕೆ'ಯ ಬಗ್ಗೆ 10 ನಿರ್ಣಯಗಳು ಅಂಗೀಕೃತವಾಗಿ ಅವುಗಳನ್ನು ಸರಕಾರಕ್ಕೆ ಹಾಗೂ ಕರ್ನಾಟಕದ ಶಾಸಕರಿಗೆ ಕಳಿಸಿಕೊಡಲು ತೀರ್ಮಾನಿಸಲಾಯಿತು.

ಇಲ್ಲಿ ಬ್ಯಾಂಕ್ ಉದ್ಯೋಗಿಗಳು ಕನ್ನಡದ ಬಳಕೆಯ ಬಗ್ಗೆ ತೋರಿದ ಪ್ರಾಮಾಣಿಕ ಕಳವಳಿ ಶ್ಲಾಘನೀಯ. 'ಕೇವಲ ಸಂಬಳಕ್ಕೆ ಹೋರಾಡುವವರು' ಎಂದು ಆಪಾದಿಸುವವರು ಇದನ್ನು ಗಮನಿಸಬೇಕು, ಉದ್ಯೋಗಿಗಳು ಕಾತರ-ಆತಂಕ ವ್ಯಕ್ತಪಡಿಸಿದಂತೆ ಬ್ಯಾಂಕುಗಳಲ್ಲಿ ಕನ್ನಡದ ಬಳಕೆ ಶೋಚನೀಯ ಸ್ಥಿತಿಯಲ್ಲಿದೆ. ಕನ್ನಡ ಬಳಸುವವರನ್ನು ಅಪಹಾಸ್ಯ ಮಾಡಲಾಗುತ್ತಿದೆ, ಕೀಳಾಗಿ ಕಾಣಲಾಗುತ್ತಿದೆ. ಕೆಲವು ಬ್ಯಾಂಕುಗಳು ಅಂಥವರ ವಿರುದ್ಧ ಕ್ರಮ ಕೈಗೊಳ್ಳುತ್ತಿವೆ. ಎಡಗೈ ಹೆಬ್ಬೆಟ್ಟು ಒತ್ತಿಸಿಕೊಂಡು ಸಾಲ ಕೊಡುವ ಮಾರವಾಡಿಗಳಂತೆ ಬ್ಯಾಂಕುಗಳು ಜನರಿಗೆ ತಿಳಿಯದ ಭಾಷೆಯಲ್ಲಿ ವ್ಯವಹರಿಸುತ್ತಿವೆ. 'ಬ್ಯಾಂಕಿಂಗ್ ನಿಘಂಟು'ವಿನ ಉಪಯೋಗವನ್ನು ಎಷ್ಟು ಬ್ಯಾಂಕುಗಳು ಪಡೆಯುತ್ತಿವೆ? ರಾಜ್ಯ ಸರ್ಕಾರ ಇದರ ಬಗ್ಗೆ ಒತ್ತಾಯ ತರಲೇಬೇಕು. ಇಂಗ್ಲಿಷ್‌ಶಾಹಿಯಿಂದ ಬ್ಯಾಂಕುಗಳು ಮುಕ್ತವಾಗಲೇಬೇಕು. ಇಂಥ ಪರಿಸ್ಥಿತಿಯಲ್ಲಿ ಈ ವಿಚಾರಸಂಕಿರಣ ಸಾಮಯಿಕವಾಗಿದ್ದು, ಅಲ್ಲಿ ಬ್ಯಾಂಕುಗಳ ಉದ್ಯೋಗಿಗಳು ತೋರಿದ ಪ್ರತಿಕ್ರಿಯೆ ಅನುಕರಣೀಯ.

ಆದರೆ ಇಂಥ ಮಹತ್ವದ ವಿಷಯದ ಬಗ್ಗೆ ಕನ್ನಡದ ಯಾವ ಪತ್ರಿಕೆಯಲ್ಲೂ ವರದಿ ಬರಲಿಲ್ಲ. ಇದು ವಿಷಾದಕರ. ನಮ್ಮ ಜನಪರ ಮಾಧ್ಯಮಗಳು ಇಂಥ ಮಹತ್ತರ ವಿಚಾರಗಳಿಗೆ ಯುಕ್ತ ಗಮನ ನೀಡುವುದು ಅಗತ್ಯವಾಗಿದೆ. ● ● ●

### ದಿಕ್‌ಚ್ಯುತಿಯೆ ?

ಬ್ಯಾಂಕುಗಳ ಮೂಲವಾದ ಪರಿಕಲ್ಪಿತ ಧ್ಯೇಯೋದ್ದೇಶವೆಂದರೆ, ಸಾರ್ವಜನಿಕರಿಂದ ಠೇವುಗಳನ್ನು ಸ್ವೀಕರಿಸಿ, ಆ ಠೇವಿನ ಹಣವನ್ನು ಯೋಗ್ಯ ವ್ಯಕ್ತಿ–ಸಂಸ್ಥೆ–ಉದ್ದೇಶಗಳಿಗೆ ಸಾಲವನ್ನೀಯುವುದು. ಆದರೆ, ಬ್ಯಾಂಕುಗಳು ಇಂದು ಈ ಸಾಂಪ್ರದಾಯಿಕ ಬ್ಯಾಂಕಿಂಗ್ ವ್ಯವಸ್ಥೆಯಿಂದ ದೂರ ಸರಿದು, ತನ್ನಲ್ಲಿ ಸಂಚಿತವಾಗಿರುವ ಸಂಪನ್ಮೂಲಗಳ ದೊಡ್ಡ ಪಾಲನ್ನು ಸಾರ್ವಜನಿಕರ ಹಿತದ ದೃಷ್ಟಿಯಿಂದ, ಸರಕಾರ ಗೊತ್ತುಪಡಿಸಿದ ಕಾರ್ಯಕ್ರಮಗಳಿಗೆ ಮೀಸಲಿರಿಸಬೇಕಾಗಿದೆ. ಇದರಿಂದ, ಸಾಮಾಜಿಕ ಹೊಣೆಗಾರಿಕೆ ಮತ್ತು ಸಾರ್ವಜನಿಕರ ಒತ್ತಡಗಳು ವಾಣಿಜ್ಯ ಬ್ಯಾಂಕುಗಳ ಮೇಲೆ ಹೆಚ್ಚು ಬೀಳುತ್ತಿರುವುದು ಸ್ವಾಭಾವಿಕ. ಜನತೆಯ ಆಶೋತ್ತರಗಳಂತೆ ಬ್ಯಾಂಕುಗಳು ಕಾರ್ಯಮಾಡದಾಗ ಘರ್ಷಣೆಗಳು ಬರುತ್ತವೆ. ಲಾಭದ ಜೊತೆ ಅಭಿವೃದ್ಧಿಯ ಧ್ಯೇಯೋದ್ದೇಶಗಳನ್ನು ಹೊಂದಿದ ಬ್ಯಾಂಕುಗಳು ಈಗ ಸ್ವಲ್ಪ ಹಿಂದೆ ಸರಿಯುವಂತಾಗಿದೆ. ವಾಣಿಜ್ಯ ಬ್ಯಾಂಕುಗಳು ಸರಕಾರ ನಡೆಸುವಂತೆ ಖೋತಾ ಆಯ-ವ್ಯಯಗಳ ಮೇಲೆ ನಡೆಯುವಂತಿಲ್ಲ! ಅವುಗಳು ತಮ್ಮ ಕಾಲ ಮೇಲೆ ನಿಲ್ಲಬೇಕು. ಆದರೆ ಈ ಬ್ಯಾಂಕುಗಳ ಕಾರ್ಯವಿಧಾನದಲ್ಲಿ ಸರಕಾರ ಕೆಲ ವಿಶಿಷ್ಟ ಬಂಧನಗಳನ್ನು ಹೇರುತ್ತಿರುವುದರಿಂದ, ಅವು ತಮ್ಮ ಶಕ್ತಿಗೆ ನಿಲುಕದ ಕಾರ್ಯಗತಿಯನ್ನು ಹೆಚ್ಚಿಸಿ, ಸಾಮಾಜಿಕ ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗಿದೆ. ಹೀಗಾಗಿ, ಬ್ಯಾಂಕುಗಳ ಮೇಲೆ ಹಿಂದೆಂದೂ ಇಲ್ಲದ ಆರ್ಥಿಕ, ಸಾಮಾಜಿಕ, ಕೆಲ ಸಮಯ ರಾಜಕೀಯ, ಒತ್ತಡಗಳು ಬೀಳಹತ್ತಿವೆ. ಠೇವುದಾರರಿಗೆ ಠೇವುಗಳನ್ನು ಮರಳಿ ಕೊಡುವ ದೊಡ್ಡ ಜವಾಬ್ದಾರಿ ಬ್ಯಾಂಕುಗಳ ಮೇಲಿದೆ. ಆದರೆ ಬ್ಯಾಂಕುಗಳಲ್ಲಿ ಈ ಠೇವುದಾರರಿಗೆ ಯಾವ ಧ್ವನಿಯೂ ಇಲ್ಲ. ಈಗ ಬ್ಯಾಂಕುಗಳಿಂದ ಸಾಲ ಪಡೆದವರ ಮತ್ತು ಪಡೆಯಬಯಸುವವರ ಧ್ವನಿಯೇ ಎತ್ತರವಾಗಹತ್ತಿದೆ. ಠೇವುದಾರರು ಬ್ಯಾಂಕುಗಳಿಗೆ ಸಾಲಕ್ಕೆ ಬರುವುದು ಅಪರೂಪ. ಬಂದರೂ, ಅವರು ತಮ್ಮ ಠೇವುಗಳ ವಿಶ್ವಾಸದ ಮೇಲೆ ಸಾಲವನ್ನು ಪಡೆಯುತ್ತಾರೆ. ಪ್ರಾಯಶಃ ಭಾರತವನ್ನು ಬಿಟ್ಟರೆ ಬೇರಾವ ದೇಶಗಳಲ್ಲಿಯೂ ಕರೆದು ಸಾಲ ಕೊಡುವ, ಸಾಲಗಾರರು ಇದ್ದಲ್ಲಿಯೇ ಸಾಲ ಕೊಡುವ ಅಥವಾ ಒತ್ತಾಯಿಸಿ ಸಾಲವನ್ನು ಪಡೆಯುವ ವ್ಯವಸ್ಥೆ ಇದ್ದಂತಿಲ್ಲ. ಇದರಿಂದ ಬ್ಯಾಂಕಿನ ಸಾಲಗಳ ಗುಣಾತ್ಮಕ ಅಂಶ ತೀರ ಇಳಿದಿದೆ ಎಂದು ಅಭಿಪ್ರಾಯ ಪಡೆಯುವ ಆರ್ಥಿಕ ತಜ್ಞರ ಹೇಳಿಕೆಯಲ್ಲಿ ಸತ್ಯಾಂಶವಿಲ್ಲದೇ ಇಲ್ಲ. ದಿನದಿನವೂ ಬೆಳೆಯುತ್ತಿರುವ ಈ ಒತ್ತಡವನ್ನು ತಡೆದುಕೊಳ್ಳುವ ಆರ್ಥಿಕ ಸಾಮರ್ಥ್ಯ ಬ್ಯಾಂಕುಗಳಿಗೆ ಇದೆಯೇ ಹೇಗೋ ಎಂದು ಅಳೆದು ನೋಡಬೇಕಾದದ್ದು ಈಗ ಒಂದು ಮುಖ್ಯ ಕಾರ್ಯ !

ಒಳದೇಶದಲ್ಲಿ ಲಾಭಾಂಶ ಕಡಿಮೆಯಾಗಹತ್ತಿದೆ ಎಂದು ವಾಣಿಜ್ಯ ಬ್ಯಾಂಕುಗಳು ಸಾಗರೋತ್ತರ ವಿದೇಶಿ ವ್ಯವಹಾರಗಳಲ್ಲಿ ಕೈಹಾಕಿ, ಲಾಭದಾಶೆಗೆ ಮೈಯನ್ನೇ ಸುಟ್ಟುಕೊಳ್ಳುವ ಪ್ರಸಂಗಗಳಿಗೆ ಈಗೀಗ ಗುರಿಯಾಗಹತ್ತಿವೆ. ವಿದೇಶಿ ಪೇಟೆಯಲ್ಲಿ ವ್ಯವಹಾರ ಮಾಡಿ, ಭಾರತದ ಅನೇಕ ಪ್ರಮುಖ ಬ್ಯಾಂಕುಗಳು ಈಗ ಕಹಿ ಅನುಭವಗಳನ್ನು ಅನುಭವಿಸಬೇಕಾಗಿದೆ.

ವಿದೇಶಿ ಹಣದಲ್ಲಿ ಭಾರತೀಯ ಮೂಲದವರಿಗೆ ಸಾಗರೋತ್ತರದಲ್ಲಿ ಸಾಲ ಕೊಡಲು ಹೋದ ಬ್ಯಾಂಕುಗಳು ಗಳಿಸಿದ್ದಕ್ಕಿಂತ ಹೆಚ್ಚು ಕಳೆದುಕೊಳ್ಳಹತ್ತಿವೆ ಎಂದು ಒಂದು ಅಂದಾಜು. ಸರಕಾರ ಇತ್ತ ಲಕ್ಷ್ಯವನ್ನು ಹಾಕಿ ಪರಿಹಾರವನ್ನು ಕಂಡುಹಿಡಿಯಬೇಕು. ಈ ವಿದೇಶೀ ವ್ಯವಹಾರಗಳು ಅತ್ಯಂತ ಸ್ಪರ್ಧಾತ್ಮಕ ರೀತಿಯಲ್ಲಿ ನಡೆದು, ಒಮ್ಮೆಲೆ ಏರುಪೇರಾಗಿ, ಸಂದಿಗ್ಧ ಸ್ಥಿತಿಗೆ ಸಿಲುಕಿಕೊಳ್ಳುವ ದುರ್ಧರ ಪ್ರಸಂಗಗಳನ್ನು ಭಾರತೀಯ ಬ್ಯಾಂಕುಗಳು ಎದುರಿಸುತ್ತಿರುವ ಉದಾಹರಣೆಗಳು ಇಂದು ಹೆಚ್ಚಾಗಹತ್ತಿವೆ. ವಿದೇಶೀ ಪೇಟೆಗಳ ಅನುಭವವಿದ್ದ ಸಿಬ್ಬಂದಿ ಮತ್ತು ವಿದೇಶಿ ಪೇಟೆಗಳನ್ನು ನಿಯಂತ್ರಿಸುವ ಪರಿಜ್ಞಾನವಿದ್ದ ಆಡಳಿತಗಾರರ ಕೊರತೆ ಈ ಕೈಸುಟ್ಟುಕೊಳ್ಳುವಿಕೆಗೆ ಕಾರಣವೆಂದು ಹಲವರ ಅಭಿಪ್ರಾಯ. ಭಾರತದಿಂದ ಸೇವೆಗಾಗಿ ಹೋದ ಸಿಬ್ಬಂದಿ ಹಣ ಮಾಡಿಕೊಂಡು ಅಥವಾ ಬೇರೆ ವಿದೇಶೀ ಬ್ಯಾಂಕುಗಳನ್ನು ಸೇರಿಕೊಂಡು, ತಮ್ಮ ಭಾರತೀಯ ಸೇವೆಗಳನ್ನೇ ತ್ಯಜಿಸುವ ಪ್ರಕರಣಗಳೂ ಇತ್ತೀಚೆಗೆ ಹೆಚ್ಚಾಗಿವೆ. ಈ ಪ್ರವೃತ್ತಿಯಿಂದ ಬ್ಯಾಂಕುಗಳ ಮೇಲೆ ಬಲವಾದ ಪ್ರಹಾರ ಬೀಳಹತ್ತಿದೆ.

ಮೂರನೆಯದು, ಆದ್ಯತೆಯ ಕ್ಷೇತ್ರಕ್ಕೆಂದು ಮೀಸಲಿರಿಸಿದ ಹಣ ಸಾಲ ಕೊಟ್ಟ ಮೇಲೆ ಸಣ್ಣ ಕೈಗಾರಿಕೆ ಮತ್ತು ವ್ಯವಸಾಯರಂಗಗಳಲ್ಲಿ ಸಿಕ್ಕುಬೀಳುವುದು ! ಈ ರಂಗಗಳಿಂದ ಮರುಪಾವತಿಯಾಗುವ ಗತಿ ಅಧೋಗತಿಯಾಗಹತ್ತಿದೆ. ಅಲ್ಲದೆ ಬ್ಯಾಂಕುಗಳಿಂದ ಸಾಲ ಪಡೆದ ಉದ್ದಿಮೆಗಳು ದುರ್ಬಲವಾಗುತ್ತ ನಡೆದು, ರೋಗಗ್ರಸ್ತವಾಗಹತ್ತಿವೆ. ರೋಗಪೀಡಿತ ಉದ್ದಿಮೆಗಳ ಸಂಖ್ಯೆ ಭಾರತದಲ್ಲಿ ಪ್ರತಿಶತ ಎಂಟರಷ್ಟಿದ್ದು, ಜೂನ್ 1983ರ ಹೊತ್ತಿಗೆ ರೂ. 2,793 ಕೋಟಿ ಕಟ್ಟಾಬಾಕಿಯಾಗಿದೆ. ವ್ಯವಸಾಯರಂಗಕ್ಕಿತ್ತ ಸಾಲದ ಮರುಪಾವತಿ ಅತ್ಯಂತ ಅತೃಪ್ತಿಕರವಾಗಿದೆ. ಕೇವಲ ಪ್ರತಿಶತ 51.3ರಷ್ಟು ಮರುಪಾವತಿ ಇದೆ. ಕಳೆದೆರಡು ವರುಷ ಒಳ್ಳೇ ಕೃಷಿ ಉತ್ಪನ್ನ ಬಂದಿದ್ದರೂ ರೈತರು ಮರಳಿ ಸಾಲ ಕೊಡುವಲ್ಲಿ ಹಿಂದೇಟನ್ನು ಹಾಕುತ್ತಾರೆ. ಇದು ಆರ್ಥಿಕ ರಂಗದಲ್ಲಿ ಕಳವಳವನ್ನುಂಟುಮಾಡಹತ್ತಿದೆ. ಕೃಷಿಯ ಅಭಿವೃದ್ಧಿಯಷ್ಟೇ ಉದ್ಯೋಗ ರಂಗದಲ್ಲಿ ಕೂಡ ಕೊಟ್ಟ ಸಾಲವನ್ನು ಮರಳಿ ಕೊಡದ ಚಾಳ್ಯ ಹೆಚ್ಚುತ್ತದೆ. ರಿಸರ್ವ್ ಬ್ಯಾಂಕ್ ಈ ಎರಡೂ ರಂಗಗಳಿಂದ ಮರಳಿ ಸಾಲವನ್ನು ಪಡೆದರೆ, ಬ್ಯಾಂಕುಗಳ ಲಾಭದಂಶ ಹೆಚ್ಚುತ್ತದೆಂದು ಅಭಿಪ್ರಾಯವನ್ನು ತಾಳಿದೆ. ಪ್ರತಿ ವರುಷವೂ ಬ್ಯಾಂಕುಗಳು ಹೆಚ್ಚು ಹೆಚ್ಚು ಸಾಲಗಳನ್ನು ಒದಗಿಸಬೇಕಾಗುವುದರಿಂದ ಮರುಪಾವತಿಯಾಗದೆ ಉಳಿದ ಸಾಲದ ಮೊತ್ತ ಹೆಚ್ಚಾಗುತ್ತ ಹೋಗುತ್ತದೆ. ಈ ಮರುಪಾವತಿಯ ಸಮಸ್ಯೆ ಬ್ಯಾಂಕುಗಳ ಲಾಭದ ಮೇಲೆ ಈಗಾಗಲೇ ಪ್ರಬಲವಾದ ಪರಿಣಾಮವನ್ನುಂಟುಮಾಡಹತ್ತಿದೆ. ಆರುನೂರು ಶಾಖೆಗಳನ್ನು ಹೊಂದಿದ, 400 ಕೋಟಿ ರೂಪಾಯಿಗಳಿಗೂ ಹೆಚ್ಚು ಠೇವುಗಳಿರುವ ಕರ್ನಾಟಕ ರಾಷ್ಟ್ರೀಕೃತ ಬ್ಯಾಂಕೊಂದು 1983ರಲ್ಲಿ ಕೇವಲ 5 ಲಕ್ಷ ರೂಪಾಯಿ, 1984ರಲ್ಲಿ 6 ಲಕ್ಷ ರೂಪಾಯಿ ನಿವ್ವಳ ಲಾಭವನ್ನು ಗಳಿಸಿದೆಯೆಂದ ಮೇಲೆ, ರಾಷ್ಟ್ರೀಕೃತ ಬ್ಯಾಂಕುಗಳ ಲಾಭಾಂಶ ಹೇಗೆ ಇಳಿಯುತ್ತಿದೆ ಎಂಬುದಕ್ಕೆ ಇದೊಂದು ಸಣ್ಣ ನಿದರ್ಶನ. ವಾಣಿಜ್ಯ ಬ್ಯಾಂಕುಗಳು ಈಗ ಭವಿಷ್ಯದ ಬಗ್ಗೆ ಜಾಗರೂಕತೆಯಿಂದ ಇರಬೇಕಿದೆ.

### ಹಿರಿಯ ಪಾತ್ರ

ಇತ್ತೀಚಿನ ವರದಿಗಳ ಪ್ರಕಾರ, ಹೆಚ್ಚುತ್ತಿರುವ ಅತಿಪ್ರಸರಣ, ಆದ್ಯತೆಯ ರಂಗಕ್ಕೆ ಬ್ಯಾಂಕುಗಳು ಕಡ್ಡಾಯವಾಗಿ ತಮ್ಮ ಒಟ್ಟು ಸಾಲಗಳ ಪ್ರತಿಶತ ನಲವತ್ತರಷ್ಟು ಹಣವನ್ನು ಕೊಡುವುದು, ಸರಕಾರ ತಾನು ಖರೀದಿಸುತ್ತಿರುವ ಧಾನ್ಯಗಳಿಗೆ ಕೊಡುವ ಬೆಲೆ—ಇವು ಗ್ರಾಮೀಣ ಭಾಗದತ್ತ ಹಣ ಹೆಚ್ಚು ಹರಿದುಹೋಗುವಂತೆ ಮಾಡಿವೆ.

ಆದರೆ ಈ ಗ್ರಾಮೀಣ ಭಾಗದಲ್ಲಿ ಸಂಚಿತವಾದ ಹಣ ಪುನಃ ಬ್ಯಾಂಕುಗಳ ಠೇವಣಿ ರೂಪದಲ್ಲಿ ಪರಿವರ್ತನೆಯಾಗದೆ ಬಂಗಾರದ ರೂಪದಲ್ಲಿಯೋ ದುಂದು ವ್ಯಯದಲ್ಲಿಯೋ ಪರಿವರ್ತನೆ ಗೊಳ್ಳಹತ್ತಿರುವುದರಿಂದ ಗ್ರಾಮಗಳಿಗೆ ಕೊಟ್ಟ/ಕೊಡುತ್ತಿರುವ ಋಣಭಾರ ಹೆಚ್ಚುತ್ತ ನಡೆದಿದೆ. ಈ ಗ್ರಾಮಗಳು ತಮ್ಮಲ್ಲಿರುವ ಸಂಪನ್ಮೂಲಗಳನ್ನು ಬ್ಯಾಂಕುಗಳಲ್ಲಿಟ್ಟು ರಾಷ್ಟ್ರಕಾರ್ಯಕ್ಕೆ ಉಪ ಯೋಗಿಸುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳದ ವಿನಾ, ಗ್ರಾಮಾಂತರ ಆರ್ಥಿಕಸ್ಥಿತಿ ಉತ್ತಮಗೊಳ್ಳುವುದು ಸ್ವಲ್ಪ ಅನುಮಾನಾಸ್ಪದ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (ಎನ್.ಆರ್.ಇ.ಪಿ.) ಗ್ರಾಮೀಣ ಭೂರಹಿತ ಕಾರ್ಮಿಕರಿಗೆ ಉದ್ಯೋಗಗಳನ್ನು ಖಂಡಿತ ಒದಗಿಸಿಕೊಡುವ ಕಾರ್ಯಕ್ರಮ (ಆರ್.ಎಲ್.ಇ.ಜಿ.ಪಿ.), ಸರ್ವಾಂಗೀಣ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ (ಐ.ಆರ್.ಡಿ.ಪಿ.)ಗಳಂತಹ ದೊಡ್ಡ ಭಾರವನ್ನು ಸರಕಾರ ಬ್ಯಾಂಕುಗಳ ಮೇಲೆ ಹೊರಿಸಿರುವುದರಿಂದ ಬ್ಯಾಂಕುಗಳು ತಮ್ಮಲ್ಲಿರುವ ಸಂಪನ್ಮೂಲಗಳಿಂದ ಈ ಕಾರ್ಯಕ್ರಮಗಳಿಗೆ ಸಾಲವನ್ನು ಕೊಡ ದಿದ್ದರೆ ದೇಶದ ಆರ್ಥಿಕ ಪರಿಸ್ಥಿತಿ ಬಳಲಬೇಕಾಗುತ್ತದೆ. ಈ ಎಲ್ಲ ಪ್ರಗತಿಪರ ಕಲ್ಯಾಣಕಾರಕ ಕಾರ್ಯಕ್ರಮಗಳೂ ಸಣ್ಣ ಕೈಗಾರಿಕೆ ಮತ್ತು ವ್ಯವಸಾಯಾಭಿವೃದ್ಧಿಯಲ್ಲಿ ಸಮನ್ವಯಗೊಂಡಿರುವುದ ರಿಂದ ಗ್ರಾಮಗಳ ಆರ್ಥಿಕ, ಆರ್ಥಿಕ ಮೂಲದಿಂದ ಸಾಮಾಜಿಕ ಸ್ಥಿತಿ ಉತ್ತಮಗೊಳ್ಳುತ್ತ ನಡೆದಿದೆ. ಇಂದು ಹಸಿರುಕ್ರಾಂತಿ ಯಶಸ್ವಿಯಾಗಿದ್ದರೆ, ಶ್ವೇತಕ್ರಾಂತಿಯಿಂದ ಕ್ಷೀರೋತ್ಪನ್ನ ಹೆಚ್ಚಾಗಿದ್ದರೆ, ಸಣ್ಣ ಕೈಗಾರಿಕೆಗಳಲ್ಲಿ ಅಪ್ರತಿಮ ಪ್ರಗತಿ ಸಾಧಿಸಿ ದ್ದರೆ ಅದು ಬ್ಯಾಂಕುಗಳ ಸಹಾಯದಿಂದ ಎಂದು ಎದೆ ತಟ್ಟಿ ಹೇಳ ಬಹುದು. ಕೃಷಿ ಉತ್ಪನ್ನ ಬೆಳೆದರೆ, ಉದ್ದಿಮೆಗಳು ತಮ್ಮ ಉತ್ಪಾದನೆಯನ್ನು ಹೆಚ್ಚಿಸಿದರೆ, ಖಂಡಿತ ಹಣದುಬ್ಬರ ಬೆಳೆಯದೆ ಇಳಿಮುಖವಾಗುತ್ತದೆ. ಈ ದಿಶೆಯಲ್ಲಿ ಬ್ಯಾಂಕುಗಳ ಪಾತ್ರ ಹಿರಿ ದಾಗಿದೆ, ಸ್ತುತ್ಯವಾಗಿದೆ—ಜವಾಬ್ದಾರಿಯುತವಾಗಿದೆ.

ಈ ದೇಶದಲ್ಲಿ ಈಗ ಇರುವ ಟ್ರಕ್ಕುಗಳ ಸಂಖ್ಯೆ ಐದು ಲಕ್ಷ. ಟ್ರಾಕ್ಟರುಗಳ ಸಂಖ್ಯೆ ನಾಲ್ಕು ಲಕ್ಷ. ಆದರೆ ಹಳ್ಳಿಗಳಲ್ಲಿರುವ ಎತ್ತಿನ ಗಾಡಿಗಳು 120 ಲಕ್ಷ. ಈ ಎತ್ತಿನ ಗಾಡಿಗಳಿಂದ ನಿರ್ಮಾಣವಾಗುವ ಶಕ್ತಿ ದೇಶದ ಸಮಗ್ರ ವಿದ್ಯುಚ್ಛಕ್ತಿಗೆ ಸಮವಾಗಿದೆಯೆಂದು ಒಂದು ಸಮೀಕ್ಷೆ ಹೇಳುತ್ತದೆ. ಈ ಎತ್ತುಗಳಿಗೆ ಮತ್ತು ಬಂಡಿಗಳಿಗೆ ಹೆಚ್ಚು ಬ್ಯಾಂಕಿನ ಸಹಾಯ ಸಂದಿದೆ. ಆದ್ದರಿಂದ ಈ ಪ್ರಗತಿ! ಭಾರತ ಎಷ್ಟೇ ಮುಂದುವರಿದರೂ ಎತ್ತಿನ ಗಾಡಿಗಳನ್ನು ಕಡೆಗಣಿಸದಂತಹ ಸ್ಥಿತಿಯಲ್ಲಿದೆ. ದೇಶದಲ್ಲಿ ಜಲಾಭಾವದಿಂದ ವಿದ್ಯುತ್ತಿನ ಉತ್ಪಾದ ನೆಗೆ ಆತಂಕವಾಗಿದ್ದರಿಂದ, ಭಾರತ ಎತ್ತುಗಳ ಶಕ್ತಿಯನ್ನು ಕುದುರೆ ಶಕ್ತಿಯ ಮುಂದೆ ಹೀಗಳೆಯಲು ಬರದಂತಾಗಿದೆ. ಈ ದಿಶೆಯಲ್ಲಿ ಎತ್ತು-ಬಂಡಿಗಳ ಖರೀದಿಗೆ ಬ್ಯಾಂಕುಗಳ ಸಹಾಯ ಸಂದು, ಅವು ದೇಶದ ಆರ್ಥಿಕ ಬಲವನ್ನು ಹೆಚ್ಚಿಸುವಲ್ಲಿ ಶ್ರಮಿಸುತ್ತವೆ.

### ದೋಷಾರೋಪಣೆ

ಸರಕಾರ ರೂಪಿಸಿದ ಹಲವಾರು ಜನೋಪಯೋಗಿ ಕಾರ್ಯ ಕ್ರಮಗಳು ಅನುಷ್ಠಾನಗೊಂಡಿವೆಯೋ ಇಲ್ಲವೋ ಎಂದು ಮೌಲ್ಯೀಕರಣ ಮಾಡುವಲ್ಲಿ ವಿಲಂಬವಾಗುತ್ತಿರುವುದರಿಂದ, ಬ್ಯಾಂಕು ಗಳು ಏನು ಮಾಡಿವೆ? ಮತ್ತು ಏನು ಮಾಡುತ್ತಿವೆ? ಎಂಬ ಅಧ್ಯಾಯವೆ ತೆಗೆಯುವುದು ಸಾಧ್ಯವಾಗದಾಗಿದೆ. ಇದರಿಂದ ಶ್ರೀಸಾಮಾ ನ್ಯರ ಅಭಿಪ್ರಾಯದಲ್ಲಿ ಬ್ಯಾಂಕುಗಳು ಬಡವರ ಮತ್ತು ಆರ್ಥಿಕ ವಾಗಿ ದುರ್ಬಲರಾದವರ ಸಹಾಯಕ್ಕೆ ಬರುವುದಿಲ್ಲವೆಂಬ ದೋಷಾ ರೋಪಣೆ ಕೇಳಿಬರುತ್ತಿದೆ. ಇಂದು ಸಮಾಜದಲ್ಲಿ ಛಿದ್ರಗಳನ್ನು ಶೋಧಿಸಿ ಅವುಗಳಿಗೆ ರಾವುಗನ್ನಡಿ ಹಿಡಿಯುವುದೇ ಕೆಲವರ ಪ್ರವೃತ್ತಿಯಾಗಿದೆ. ಜನತೆಯ ಜೊತೆ ಜನತಾ ಪ್ರತಿನಿಧಿಗಳೂ ಧ್ವನಿಗೂಡಿಸಿದರೆ, ಬ್ಯಾಂಕುಗಳು ಈ ಎರಡು ದಶಕಗಳಲ್ಲಿ ಮಾಡಿದ ನವಸಮಾಜ ನಿರ್ಮಾಣದ ಕಾರ್ಯ, ಹೋಮದಲ್ಲಿ ತುಪ್ಪವನ್ನು ಸುರಿದಂತಾಗುತ್ತದೆ. ರಚನಾತ್ಮಕ, ವಿಧಾಯಕ ಟೀಕೆಗಳು ಬಾರದ ವಿನಾ ಯಾವುದೇ ಕಾರ್ಯದ ಫಲಶ್ರುತಿಯನ್ನು ಕಂಡುಹಿಡಿಯು ವುದು ದುಃಸಾಧ್ಯವಾಗಿದೆ. ನೋಡುವವರ ದೃಷ್ಟಿ ಸರಿಯಾಗಬೇಕು ಅಷ್ಟೇ!

### ಕರ್ನಾಟಕದಲ್ಲಿ

ಇದು ಭಾರತೀಯ ಯಾವುದೇ ರಾಜ್ಯದಲ್ಲಿ ಕಾರ್ಯವನ್ನು ನಿರ್ವಹಿಸುತ್ತಿರುವ ವಾಣಿಜ್ಯ ಬ್ಯಾಂಕುಗಳ ಹೆಚ್ಚುಕಡಿಮೆ ವಾಸ್ತವ ಚಿತ್ರ! ಕರ್ನಾಟಕ ಇದಕ್ಕೇನು ಹೊರತಾಗಿಲ್ಲ. ಹಲವಾರು ಬ್ಯಾಂಕು ಗಳನ್ನು ತೇಲಿಸಿದ ಮತ್ತು ಹಲವಾರು ಬ್ಯಾಂಕುಗಳನ್ನು ಮುಳುಗಿ ಸಿದ ಸಿಹಿ–ಕಹಿ ಅನುಭವಗಳು ಕರ್ನಾಟಕಕ್ಕಿವೆ. ದಕ್ಷಿಣ ಕನ್ನಡ ಜಿಲ್ಲೆ ಅಂದು ಕಹಿಯನ್ನು ನುಂಗಿದೆ, ಇಂದು ಸಿಹಿಯನ್ನು ಸವಿಯುತ್ತಿದೆ.

ಕರ್ನಾಟಕ ಒಂದು ಸಮೃದ್ಧ ರಾಜ್ಯ. ಕರ್ನಾಟಕ ಶ್ರೀಮಂತವಿದೆ. ಆದರೆ ಕನ್ನಡಿಗರು ಬಡವರಾಗಿದ್ದಾರೆ! ವ್ಯವಸಾಯದಲ್ಲಿ ಕರ್ನಾಟಕ ತುಂಬಾ ಮುಂದಿದೆ. ಹಿಂದೆ ಮಂಡ್ಯ ಒಂದೇ ಸಕ್ಕರೆಯ ಜಿಲ್ಲೆ ಯಾಗಿದ್ದರೆ, ಈಗ ಬೆಳಗಾವಿ ಜಿಲ್ಲೆ ಮಂಡ್ಯವನ್ನು ಮೀರುವಂತೆ ಕಬ್ಬು ಬೆಳೆಯಲ್ಲಿ ಪ್ರಗತಿಯನ್ನು ಸಾಧಿಸಿದೆ. ಈಗ ಕರ್ನಾಟಕ ಔದ್ಯೋಗಿಕರಂಗದಲ್ಲಿ ಮುಂದುವರೆಯಹತ್ತಿದೆ. ಬೆಂಗಳೂರಿನ ಸಮೀಪದಲ್ಲಿ 400 ಕೋಟಿ ರೂಪಾಯಿಗಳ ಬಂಡವಾಳದಿಂದ ತಲೆ ಎತ್ತುತ್ತಿರುವ ಎಲೆಕ್ಟ್ರಾನಿಕ್ ನಗರ, ವೀರಸಂದ್ರ, ಬೊಮ್ಮಸಂದ್ರ, ಅತ್ತೀಬೆಲೆ ಔದ್ಯೋಗಿಕ ಘಟಕಗಳು ಬೆಂಗಳೂರನ್ನು ಇಪ್ಪತ್ತೆರಡು ಮೈಲುಗಳಷ್ಟು ಮುಂದೆಳೆದು ತಮಿಳು ನಾಡಿನ ಹೊಸೂರಿಗೆ ಜೋಡಿಸುತ್ತವೆ. ಇನ್ನು ಎರಡು ಮೂರು ವರುಷಗಳಲ್ಲಿ ಕರ್ನಾಟಕದ ಔದ್ಯೋಗಿಕ ಚಿತ್ರವೇ ಬದಲಾಗುವಂತಿದೆ. ವಿಶ್ವೇಶ್ವರಯ್ಯನವರ ಕನಸು ನನಸಾಗುತ್ತದೆ.

ಈ ಎಲ್ಲ ಬೆಳವಣಿಗೆಗೆ ಬ್ಯಾಂಕುಗಳ ಸಹಾಯ, ಸಲಹೆ ಬೇಕೇ ಬೇಕಲ್ಲ! ಕರ್ನಾಟಕ ರಾಜ್ಯ ಇನ್ನು ಎರಡು–ಮೂರು ವರುಷಗಳಲ್ಲಿ ಕಾಫಿ, ರೇಶಿಮೆ, ಊದುಬತ್ತಿ ನಿರ್ಯಾತದ ಜೊತೆ, ಇಲೆಕ್ಟ್ರಾನಿಕ್ ವಸ್ತುಗಳನ್ನು ಸಿದ್ಧಪಡಿಸಿ ನಿರ್ಯಾತ ಮಾಡುವ ಬೃಹತ್ ಯೋಜನೆ ಯನ್ನು ಹಮ್ಮಿಕೊಂಡು ದಾಪುಗಾಲು ಹಾಕಲು ಸಿದ್ಧವಾಗಿದೆ. ಕರ್ನಾಟಕ ಬ್ಯಾಂಕುಗಳು ಈಗ ಇತ್ತ ಲಕ್ಷ್ಯವನ್ನು ಹಾಕಬೇಕಿದೆ.

ಪ್ರತಿ ವರುಷವೂ ಭಾರತೀಯ ರಿಸರ್ವ್ ಬ್ಯಾಂಕು ಆಯಾ ನಗರಗಳಲ್ಲಿರುವ ಬ್ಯಾಂಕು ಠೇವಣಿ ಮತ್ತು ಅವುಗಳಿತ್ತ ಸಾಲಗಳ ಮೊತ್ತದ ಮೇಲೆ ಒಂದು ನೂರು ನಗರಗಳನ್ನಾಯ್ದು ಅವುಗಳ ಕ್ರಮಾಂಕ ಪಟ್ಟಿಯನ್ನು ಕೊಡುತ್ತದೆ. ಅಂತಹ ನಗರಗಳಲ್ಲಿ ಕರ್ನಾಟಕವು ಐದು ಸ್ಥಾನಗಳನ್ನು ಗಿಟ್ಟಿಸುತ್ತ ಬಂದಿದೆ. ಬೆಂಗಳೂರು ನಗರ 5ನೇ, ಮಂಗಳೂರು 36ನೇ, ಮೈಸೂರು 45ನೇ, ಧಾರವಾಡ 48ನೇ ಮತ್ತು ಬೆಳಗಾಂವಿ 62ನೇ ಸ್ಥಾನಗಳನ್ನು ಪಡೆದಿವೆ. ಆಯಾ ನಗರಗಳಲ್ಲಿರುವ ಠೇವಣಿ ಮತ್ತು ಸಾಲಗಳ ವಿವರ ಹೀಗಿದೆ:

| | | | (31–12–1984) (ರೂ. ಲಕ್ಷಗಳಲ್ಲಿ) | |
|---|---|---|---|---|
| | ನಗರಗಳು | ಅಲ್ಲಿರುವ ಶಾಖೆಗಳು | ಠೇವಣಿ | ಸಾಲಗಳು |
| 1 | ಬೆಂಗಳೂರು | 486 | 1384.44 | 1364.68 |
| 2 | ಮಂಗಳೂರು | 91 | 197.46 | 131.14 |
| 3 | ಮೈಸೂರು | 88 | 154.88 | 110.85 |
| 4 | ಧಾರವಾಡ | 76 | 138.01 | 63.13 |
| 5 | ಬೆಳಗಾವಿ | 60 | 109.72 | 52.06 |

ಕರ್ನಾಟಕದಲ್ಲಿ 1984 ಡಿಸೆಂಬರ್ ಹೊತ್ತಿಗೆ 3,732 ವಾಣಿಜ್ಯ ಬ್ಯಾಂಕುಗಳಿದ್ದು, ಅವುಗಳಲ್ಲಿರುವ ಠೇವಣಿ ರೂ. 3,748.35 ಕೋಟಿ ಹಾಗೂ ಸಾಲಗಳು ರೂ. 3,067.70 ಕೋಟಿ ಇವೆ. ಕರ್ನಾಟಕದ ಜನಸಂಖ್ಯೆ (1981ರ ಜನಗಣತಿಯ ಪ್ರಕಾರ) 3, 70, 43, 451. ಅಂದರೆ, ಪ್ರತಿ ಒಂದು ತಲೆಗೂ 1010 ರೂ. ಠೇವಣಿ ಮತ್ತು ರೂ. 826 ಸಾಲವಿದೆ. ಈ ಪ್ರಮಾಣ ಬೇರೆ ರಾಜ್ಯಗಳಿಗೆ ಹೋಲಿಸಿದರೆ, ನಾವು ಸರಿಸಮಾನರಾಗಿ ಕಾಣುತ್ತೇವೆ. ನಮ್ಮ ರಾಜ್ಯದಲ್ಲಿ ಸಂಪನ್ಮೂಲಗಳಿಗೆ ಕೊರತೆಯಿಲ್ಲ. ಆದರೆ ಅವುಗಳ ಸರಿಯಾದ ಬಳಕೆಯಿಲ್ಲ.

ಬೆಂಗಳೂರು ಜಿಲ್ಲೆ ಸಮೃದ್ಧ ಜಿಲ್ಲೆ ಅನ್ನುವಲ್ಲಿ ಸಂಶಯವೇ ಇಲ್ಲ. ಕಾರಣ, ಬೆಂಗಳೂರು ಜಿಲ್ಲೆಯ ಪ್ರತಿ ತಲೆಗೂ ರೂ. 2,768 ಠೇವಣಿ ಮತ್ತು ರೂ. 2,729 ರೂ. ಸಾಲವಿದೆ. ಬೆಂಗಳೂರಲ್ಲಿ ಸಾಲ ಪಡೆದವರು ಹೆಚ್ಚಿದ್ದಾರೆ. ಕಾರಣ, ಇಲ್ಲಿ ಉದ್ಯೋಗ ಮಾಡುವವರು ಹೆಚ್ಚಿದ್ದಾರೆ.

ಸಾಲದ ಭಾರ ಹೆಚ್ಚಿದಂತೆಲ್ಲ, ಔದ್ಯೋಗೀಕರಣದ ಪ್ರಗತಿ ಹೆಚ್ಚುಹೆಚ್ಚಾಗಿ ಕಂಡುಬರುತ್ತದೆ. ಕರ್ನಾಟಕದಲ್ಲಿರುವ ಒಟ್ಟು ಬ್ಯಾಂಕುಗಳ ಠೇವಣಿಗಳ ಪ್ರತಿಶತ 45.2 ಠೇವಣಿ ಬೆಂಗಳೂರು ಒಂದರಲ್ಲಿಯೇ ಇದೆ. ಬೆಂಗಳೂರು, ಮಂಗಳೂರು, ಮೈಸೂರು, ಧಾರವಾಡ, ಬೆಳಗಾಂವಿ ನಗರಗಳ ಠೇವುಗಳನ್ನು ತೆಗೆದುಕೊಂಡರೆ, ಅವು ಇಡೀ ರಾಜ್ಯದಲ್ಲಿರುವ ಠೇವುಗಳ ಪ್ರತಿಶತ 52.9 ರಷ್ಟಾಗುತ್ತವೆ. ಜಿಲ್ಲೆ–ಜಿಲ್ಲೆಗಳಲ್ಲಿರುವ ಅಂತರವನ್ನು ಹೋಗಲಾಡಿಸುವುದು ಬ್ಯಾಂಕುಗಳು ಮಾಡಬೇಕಾದ ಒಂದು ಮುಖ್ಯ ಕಾರ್ಯವಾಗಿದೆ. ಈ ಮೇಲಿನ 5 ಜಿಲ್ಲೆಗಳನ್ನು ಬಿಟ್ಟರೆ, ಉಳಿದ 14 ಜಿಲ್ಲೆಗಳಲ್ಲಿ ಪ್ರಗತಿ ಸಾಧಿಸಲು ಸಾಕಷ್ಟು ಅವಕಾಶಗಳಿವೆ. ಎಲ್ಲ ಜಿಲ್ಲೆಗಳಲ್ಲಿ ಬೀದರ ಜಿಲ್ಲೆ ಅತ್ಯಂತ ಹಿಂದುಳಿದ ಜಿಲ್ಲೆ. ಅಲ್ಲಿ ಔದ್ಯೋಗಿಕ ಬೆಳವಣಿಗೆ ಶೂನ್ಯ. ಇದರಿಂದ, ಆ ಜಿಲ್ಲೆಯಲ್ಲಿ ಉದ್ಯೋಗಗಳನ್ನು ಪ್ರಾರಂಭಿಸುವವರಿಗೆ ಸರಕಾರವು ಅನೇಕ ಸಹಾಯ–ಸವಲತ್ತುಗಳನ್ನು ಕೊಡಮಾಡಿದೆ. ಬೀದರ, ಕೊಡಗು, ಮಂಡ್ಯ ಮತ್ತು ಬೆಂಗಳೂರು ಗ್ರಾಮಾಂತರದ ನಾಲ್ಕೈದು ತಾಲ್ಲೂಕುಗಳಲ್ಲಿ ಇನ್ನೂ ಅಭಿವೃದ್ಧಿ ಆಗಬೇಕಿದೆ.

ಪ್ರತಿ 17,000 ಜನಸಂಖ್ಯೆಗೆ ಒಂದು ಬ್ಯಾಂಕ್ ಶಾಖೆ ಎಂದು ಭಾರತೀಯ ರಿಸರ್ವ್ ಬ್ಯಾಂಕಿನ ಲೆಕ್ಕಾಚಾರ. ಈ ಅಳತೆಗೋಲನ್ನು ಹಿಡಿದರೆ, ಕರ್ನಾಟಕದಲ್ಲಿ 9,800 ಜನರಿಗೆ ಒಂದು ಬ್ಯಾಂಕು ಶಾಖೆ ಇದೆ. ಇದ್ದ ಬ್ಯಾಂಕುಗಳನ್ನು ಮುಚ್ಚುವ ಸ್ಥಿತಿ ಇರುವಾಗ ಹೊಸ ಬ್ಯಾಂಕು ಶಾಖೆಗಳಿಗೆ ಅವಕಾಶವಿದೆಯೇ ಇಲ್ಲವೇ ಎಂಬ ಸಂಶಯ ಬರುವಂತಿದೆ. ದೇಶದ ಎಲ್ಲ ಬ್ಯಾಂಕುಗಳೂ ಬೆಂಗಳೂರಲ್ಲಿ ತಮ್ಮ ಶಾಖೆಗಳನ್ನು ತೆಗೆದು, ಸಂಖ್ಯಾಪ್ರಮಾಣವನ್ನು ಹೆಚ್ಚಿಸಿವೆ. ಈ ಸಂಖ್ಯಾಬಲದಿಂದ ಕರ್ನಾಟಕದ ಹಲವಾರು ಗ್ರಾಮಗಳಿಗೆ ಬ್ಯಾಂಕ್ ಶಾಖೆಗಳು ಇಲ್ಲದಂತಾಗಿದೆ. ರಿಸರ್ವ್ ಬ್ಯಾಂಕಿನ ಧೋರಣೆಯಿಂದ, ಕಳೆದ ಹತ್ತು ವರುಷಗಳಲ್ಲಿ ನಾಯಿ ಛತ್ರರಿಗಳಂತೆ ಬ್ಯಾಂಕುಗಳ ಶಾಖೆಗಳು ಹೆಚ್ಚಿವೆ. ಇವುಗಳು ಸಲ್ಲಿಸುವ ಸೇವೆ ಯಾತಕ್ಕೂ ಸಾಲದು. ಈಗಿರುವ ಶಾಖೆಗಳ ಮಧ್ಯದಲ್ಲಿರುವ ಅಂತರದ ಮೇಲೆ ಬ್ಯಾಂಕು ಶಾಖೆಗಳನ್ನು ತೆರೆಯಲು ಅನುಮತಿಯನ್ನೀಯಲು ನಿರ್ಧರಿಸಿದ ರಿಸರ್ವ್ ಬ್ಯಾಂಕಿನ ಹೊಸ ನೀತಿಯನ್ನು ಅನುಷ್ಠಾನಕ್ಕೆ ತರುವಾಗ, ಕರ್ನಾಟಕದಲ್ಲಿರುವ ವಿವಿಧ ಬ್ಯಾಂಕುಗಳು ಕರ್ನಾಟಕಕ್ಕೆ ಏನು ಮಾಡಿವೆ ಎಂಬುದನ್ನು ನಿರ್ಧರಿಸಿ ಹೊಸ ಶಾಖೆಗಳಿಗೆ ಅನುಮತಿಯನ್ನೀಯಬೇಕು. ಸುಮ್ಮನೆ ಕಲಕತ್ತಾ ಬ್ಯಾಂಕಿನ ಒಂದು ಶಾಖೆಗೋ, ಕೋಚಿನದ ಬ್ಯಾಂಕಿನ ಒಂದು ಶಾಖೆಗೋ ಅನುಮತಿಯನ್ನಿತ್ತರೆ, ಸಂಖ್ಯೆ ಹೆಚ್ಚುತ್ತದೆ, ಸೇವೆ ಸಿಗದಂತಾಗುತ್ತದೆ. ಕಾರ್ಯಮಾಡದ ಬಾಂಕ್ ಶಾಖೆಗಳನ್ನು ಬೇರೆಡೆ ಒಯ್ಯುವ ವ್ಯವಸ್ಥೆ ಆಗಬೇಕು.

ವಾಣಿಜ್ಯ ಬ್ಯಾಂಕುಗಳು ಕರ್ನಾಟಕದಲ್ಲಿ ಮಾಡಿದ ಕಾರ್ಯಗಳ ಒಂದು ವಿಹಂಗಮ ನೋಟ, ಮಾರ್ಚ್ 31, 1985ರಂದು ಹೀಗಿದೆ.

| | ಕ್ಷೇತ್ರ | ಫಲಾನುಭವಿಗಳು | ಸಾಲ ಕೊಟ್ಟ ಮೊತ್ತ | |
|---|---|---|---|---|
| 1 | ವ್ಯವಸಾಯ | 17,15,144 | 755.19 | ಕೋಟಿ ರೂ.ಗಳು |
| 2 | ಸಣ್ಣ ಕೈಗಾರಿಕೆ | 1,31,344 | 429.95 | ,, ,, |
| 3 | ಆದ್ಯತೆಯ ಕ್ಷೇತ್ರ | 25,61,001 | 1,535.58 | ,, ,, |
| 4 | ಪರಿಶಿಷ್ಟ ಜಾತಿ-ಪಂಗಡದವರು | 4,26,673 | 87.43 | ,, ,, |
| 5 | ಆರ್ಥಿಕವಾಗಿ ಹಿಂದುಳಿದವರು | 13,22.502 | 360.10 | ,, ,, |
| 6 | 20 ಅಂಶಗಳ ಕಾರ್ಯಕ್ರಮ | 10,50.568 | 516.48 | ,, ,, |

## ಭವಿಷ್ಯ

ಕರ್ನಾಟಕದಲ್ಲಿ ಉದ್ದಿಮೆಗಳು ಬೆಳೆಯಹತ್ತಿವೆ. ಆದರೆ ಅವು ಹೆಚ್ಚುಹೆಚ್ಚಾಗಿ ಬೆಳೆಯುವುದು ಬೆಂಗಳೂರು ಮತ್ತು ಅದರ ಸುತ್ತ-ಮುತ್ತ. ಈ ಉದ್ದಿಮೆಗಳು ಬೇರೆ ಜಿಲ್ಲೆಗಳಿಗೆ ಹೋಗಲು ಸಾರಿಗೆ-ಸಂಪರ್ಕಗಳ ಅಭಾವ, ತರಬೇತಿ ಪಡೆದ ಕಾರ್ಮಿಕರ ಕೊರತೆ, ಕಚ್ಚಾ ವಸ್ತುಗಳು ಸಿಗದಿರುವಿಕೆ ಕಾಣಗಳೆಂದು ಹೇಳುತ್ತಾರೆ. ಈ ಉದ್ಯೋಗಗಳು ಬೆಂಗಳೂರಿನ ಸುತ್ತಮುತ್ತಲೂ ಬೆಳೆಯಲು ಬಿಟ್ಟರೆ, ಒಂದಲ್ಲ ಎರಡು 'ಮಹಿಷಿ ಸಮಿತಿಗಳನ್ನು' ನಿಯಮಿಸಿ ಅವುಗಳ ಶಿಫಾರಸ್ಸನ್ನು ಅನುಷ್ಠಾನಕ್ಕೆ ತರದೇ ಹೋದರೆ, ಬೆಂಗಳೂರು ಕಾರ್ಪೊರೇಶನ್ನಿಗೆ ಭಾರತದ ಎಲ್ಲ ಭಾಷಿಕರು ಚುನಾಯಿತರಾಗಿ ಬರುವಲ್ಲಿ ಸಂಶಯವೇ ಇಲ್ಲ. ಉತ್ತರ ಕರ್ನಾಟಕದ ತುದಿ ಅಂಬಿಕಾರನಗರದಲ್ಲಿ ಇಂದು ತಮಿಳು ಶಾಲೆಯನ್ನು ಸರಕಾರವು ತೆರೆಯಬೇಕಾಗಿದೆ. ಕಾರಣ, ಅಷ್ಟು ತಮಿಳು ಮಕ್ಕಳು ಈಗ ಅಲ್ಲಿವೆ. ಬೃಂದಾವನ ಎಕ್ಸ್‌ಪ್ರೆಸ್ ಬೆಂಗಳೂರ ಕ್ಯಾಂಟೋನಮೆಂಟ ರೇಲುಮನೆಗೆ ಬಂದರೆ 80ರಷ್ಟು ಪ್ರಯಾಣಿಕರು ಇಳಿಯುತ್ತಾರೆ. ತ್ರಿವೆಂಡ್ರಮ್ ಎಕ್ಸ್‌ಪ್ರೆಸ್ ತ್ರಿವೆಂಡ್ರಮ್‌ದಿಂದ ಬಂದರೆ

(ಮುಂದಿನ ಪುಟಕ್ಕೆ)

# ಚಿತ್ರದುರ್ಗ ಗ್ರಾಮೀಣ ಬ್ಯಾಂಕ್

ಎಂ. ಎಸ್. ಬಾಬು

ಭಾರತ ಸರ್ಕಾರದ ಆದೇಶದಂತೆ 1975ರ ಆಕ್ಟೋಬರ್ ತಿಂಗಳಲ್ಲಿ ಕೆಲವು ವಾಣಿಜ್ಯ ಬ್ಯಾಂಕುಗಳ ಆಶ್ರಯದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಪ್ರಾರಂಭಗೊಂಡವು. ಅದರಂತೆ ಚಿತ್ರದುರ್ಗ ಗ್ರಾಮೀಣ ಬ್ಯಾಂಕನ್ನು ಕೆನರಾ ಬ್ಯಾಂಕಿನವರು ತಮ್ಮ ಆಶ್ರಯದಲ್ಲಿ 1981 ಆಗಸ್ಟ್ 5ರಂದು ತೆರೆದರು.

ಇತಿಹಾಸದ ಸುವರ್ಣ ಪುಟಗಳಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿರುವ ಚಿತ್ರದುರ್ಗ ಭವ್ಯ ಚರಿತ್ರೆ ಹಾಗೂ ದಿವ್ಯ ಪರಂಪರೆಯನ್ನೊಳಗೊಂಡ ಜಿಲ್ಲೆ. ಆದರೆ ಕೃಷಿಯಲ್ಲಿ, ಕೈಗಾರಿಕೆಯಲ್ಲಿ, ಒಟ್ಟಿನಲ್ಲಿ ಆರ್ಥಿಕರಂಗದಲ್ಲಿ ತುಂಬಾ ಹಿಂದುಳಿದಿರುವ ಈ ಜಿಲ್ಲೆ ಬರಗಾಲಪೀಡಿತ ಪ್ರದೇಶವಾಗಿದೆ. ಈ ಬರಗಾಲಪೀಡಿತ ಪ್ರದೇಶವನ್ನು ಹಚ್ಚಹಸಿರನ್ನಾಗಿ ಮಾರ್ಪಡಿಸಲು ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ ರೂಪಗೊಂಡಿತು. ಚಿತ್ರದುರ್ಗ ಜಿಲ್ಲೆಯ ಪರಿಮಿತಿಯನ್ನೊಳಗೊಂಡ ಈ ಬ್ಯಾಂಕು ಜಿಲ್ಲೆಯ ಪ್ರತಿ ಹಳ್ಳಿಯನ್ನು ಅಭಿವೃದ್ಧಿಗೊಳಿಸಿ, ಬೆಂಗಾಡಾದ ಈ ಜಿಲ್ಲೆಯ ಹಳ್ಳಿಗಳನ್ನು ಹೊನ್ನಾಡನ್ನಾಗಿ ಮಾರ್ಪಡಿಸಲೆಂದು ಉಗಮಗೊಂಡಿದೆ. ಚಿತ್ರದುರ್ಗ ಜಿಲ್ಲೆ ಒಟ್ಟು 10,852 ಚದರ ಕಿಲೋಮೀಟರ್‌ಗಳಷ್ಟು ವಿಸ್ತೀರ್ಣ ಮತ್ತು ಸುಮಾರು 20 ಲಕ್ಷ ಜನಸಂಖ್ಯೆಯನ್ನೊಳಗೊಂಡಿದೆ. ಈ ಜಿಲ್ಲೆಯಲ್ಲಿ 1.90 ಲಕ್ಷದಷ್ಟು ಜಮೀನು ಹೊಂದಿರುವ ರೈತರಲ್ಲಿ 50ರಷ್ಟು ಸಣ್ಣ ಮತ್ತು ಅತಿ ಸಣ್ಣ ರೈತರಿರುತ್ತಾರೆ. ಜಿಲ್ಲೆಯ ಬಹುತೇಕ ಸಾಗುವಳಿ ಪ್ರದೇಶ ಮಳೆಯನ್ನೇ ಅವಲಂಬಿಸಿರುತ್ತದೆ. ಸಣ್ಣ ಮತ್ತು ಅತಿಸಣ್ಣ ರೈತರನ್ನು, ದುರ್ಬಲ ವರ್ಗದವರನ್ನು, ಕುಶಲಕರ್ಮಿಗಳನ್ನು ಆರ್ಥಿಕವಾಗಿ ಮೇಲೆತ್ತುವುದು ಈ ಬ್ಯಾಂಕಿನ ಮೂಲ ಉದ್ದೇಶವಾಗಿದೆ. ಗ್ರಾಮೀಣ ಪ್ರದೇಶದ ಸರ್ವಾಂಗೀಣ ಪ್ರಗತಿ ಸಾಧ್ಯವಾಗಬೇಕಾದರೆ ಕೃಷಿಯ ಜೊತೆಗೆ ಕೃಷೀತರ ಚಟುವಟಿಕೆಗಳು ಸಮಸಮವಾಗಿ ಅಭಿವೃದ್ಧಿ ಹೊಂದುವುದು ಅತ್ಯಗತ್ಯ. ಕೃಷಿ ಹಾಗೂ ಗ್ರಾಮಾಭಿವೃದ್ಧಿಗಾಗಿ, ಗ್ರಾಮೀಣ ಜನತೆಯ ಏಳಿಗೆಗಾಗಿ ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ ಈಗಾಗಲೇ ನಾಲ್ಕು ವರ್ಷಗಳನ್ನು ಯಶಸ್ವಿಯಾಗಿ ಪೂರೈಸಿ ಐದನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ.

ಎಂ. ಎಸ್. ಬಾಬು, ಚಿತ್ರದುರ್ಗ ಗ್ರಾಮೀಣ ಬ್ಯಾಂಕ್, ಪ್ರಧಾನ ಕಛೇರಿ, ಚಿತ್ರದುರ್ಗ 377 501

**ಶಾಖಾ ವಿಸ್ತರಣೆ**

ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ ಪ್ರಾರಂಭವಾಗಿ 44 ತಿಂಗಳ ಅವಧಿಯಲ್ಲಿ 96 ಶಾಖೆಗಳನ್ನು ಸ್ಥಾಪಿಸಿದೆ. ಬ್ಯಾಂಕಿನ ಅಭಿವೃದ್ಧಿ ಕಾರ್ಯಗಳನ್ನು ವಿಕೇಂದ್ರೀಕರಿಸಲು, ಭೂ ದಾಖಲೆಗಳನ್ನು ಒತ್ತೆ ಇಡಲು ಹಾಗೂ ಹೆಚ್ಚುಹೆಚ್ಚು ಠೇವಣಿ ಸಂಗ್ರಹಿಸಲು ಅನುಕೂಲವಾಗುವಂತೆ ಜಿಲ್ಲೆಯ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿಯೂ ಬ್ಯಾಂಕಿನ ಶಾಖೆಗಳನ್ನು ತೆರೆಯಲಾಗಿದೆ. ಬ್ಯಾಂಕಿನ ವತಿಯಿಂದ 1981ರಲ್ಲಿ 15 ಶಾಖೆಗಳನ್ನು, 1982ರಲ್ಲಿ 35 ಶಾಖೆಗಳನ್ನು, 1983ರಲ್ಲಿ 14 ಶಾಖೆಗಳನ್ನು, 1984ರಲ್ಲಿ 21 ಶಾಖೆಗಳನ್ನು, 1985ರಲ್ಲಿ 11 ಶಾಖೆಗಳನ್ನು ತೆರೆಯಲಾಗಿದ್ದು, ಈ ವರ್ಷದ ಅಂತ್ಯದ ವೇಳೆಗೆ ಇನ್ನೂ 5 ಶಾಖೆಗಳನ್ನು ತೆರೆಯುವ ಗುರಿ ಇಟ್ಟುಕೊಳ್ಳಲಾಗಿದೆ. ಒಟ್ಟು 101 ಶಾಖೆಗಳನ್ನು ಬ್ಯಾಂಕಿನ ವತಿಯಿಂದ ತೆರೆಯುವ ನಿರೀಕ್ಷೆಯಿದೆ. 1981ರಲ್ಲಿ ಒಂದು ಶಾಖೆಯ ಸರಾಸರಿ ಜನಸಂಖ್ಯೆ 22,175 ಆಗಿದ್ದು, 1984ರ ಅಂತ್ಯದ ವೇಳೆಗೆ 10,175 ಜನಸಂಖ್ಯೆ ಆಗಿದೆ. 1984ರ ಅಂತ್ಯದ ವೇಳೆಗೆ ಜಿಲ್ಲೆಯ ಸಾವಿರಾರು ಹಳ್ಳಿಗಳಲ್ಲಿ ಸುಮಾರು 1,150 ಹಳ್ಳಿ

---

(ಹಿಂದಿನ ಪುಟದಿಂದ)

ಬೆಂಗಳೂರು ಈಸ್ಟ್ ರೇಲು ಮನೆಗೇ ಖಾಲಿಯಾಗುತ್ತದೆ. ಉಳಿದ ಬೀಕಲು ಜನರಷ್ಟೇ ಬೆಂಗಳೂರ ಸಿಟಿರೇಲುಮನೆಯಲ್ಲಿ ಇಳಿಯುವರು. ಅವರೇ ಕನ್ನಡಿಗರು. ಕರ್ನಾಟಕ ಬೆಳೆಯಬೇಕು. ಯಾರಿಗೆ ? ಅನ್ನುವುದು ಒಂದು ವಿಚಾರ ವಿಮರ್ಶೆಗೆ ಯೋಗ್ಯವಾದ ಪ್ರಶ್ನೆಯಾಗಿದೆ. ಇಲ್ಲಿರುವವರೆಲ್ಲರೂ ಸೌಹಾರ್ದದಿಂದ ಬಾಳಬೇಕು ! ಇಲ್ಲಿದ್ದವರು ಹೊಟ್ಟೆಗೆ ಕೇರು ಹಾಕಿಕೊಳ್ಳಬೇಕೇ ? ಈ ಅಭಿವೃದ್ಧಿಯ ಜೊತೆ, ಕನ್ನಡಿಗರ ಮುಂದಿನ ಗತಿಯನ್ನು ನಿರ್ಧರಿಸಬೇಕು. ಕನ್ನಡ ಉಳಿಯಬೇಕು, ಬೆಳೆಯಬೇಕು ! ಅದರ ಜೊತೆ ಕನ್ನಡಿಗರು ಉಳಿಯುವಂತೆ ನೋಡಬೇಕಾದದ್ದು ಸರಕಾರದ ಆದ್ಯ ಕರ್ತವ್ಯವಾಗಿದೆ. ಬ್ಯಾಂಕುಗಳ ಕಾರ್ಯವಿಧಾನವೆಲ್ಲಾ ಸರಿಯಾಗಿದೆ ಎಂದು ನನ್ನ ಅಭಿಪ್ರಾಯವಲ್ಲ. ನಡೆಯುವ ಮನುಷ್ಯ ಎಡವುವವನೇ! ಎಡವಿದಾಗ, ಎದ್ದು ಸರಿಹೆಜ್ಜೆ ಇಡುವಂತೆ ಮಾಡಬೇಕಾದದ್ದು ಸರಕಾರದ-ಸಮಾಜದ-ಶ್ರೀಸಾಮಾನ್ಯರ ಕರ್ತವ್ಯ. ಬ್ಯಾಂಕುಗಳಲ್ಲಿರುವ ಕಾರ್ಯವಿಧಾನ, ಪದ್ಧತಿ, ಶಿಸ್ತು, ಬ್ಯಾಂಕರುಗಳ ನಡತೆ, ಆಚಾರ-ವಿಚಾರ, ಸಮರ್ಪಕವಾಗಿವೆ ಎಂದು ಹೇಳುವವನು ನಾನಲ್ಲ. ಕಾರಣ, ದೇಶದಲ್ಲಿ ಅಲ್ಲಲ್ಲಿ ನಡೆಯುವದೇ ಬ್ಯಾಂಕುಗಳಲ್ಲಿ ನಡೆಯುತ್ತದೆ. ದೇಶದ ಜನತೆಯ ಸಮಗ್ರ ದೃಷ್ಟಿ ಬದಲಾಗದ ವಿನಾ, ಬ್ಯಾಂಕುಗಳಲ್ಲಿ ಅಷ್ಟೇ ಅದನ್ನು ಬದಲಿಸಿದರೆ, ಉಸುರಿನ ಅರಣ್ಯದಲ್ಲಿ ಹೆಜ್ಜೆ ಹೆಜ್ಜೆಗೆ ನೀರನ್ನು ಬಯಸಿದಂತಾಗುತ್ತದೇನೋ !

ಕರ್ನಾಟಕದ ಬ್ಯಾಂಕುಗಳು ವ್ಯವಸಾಯ, ಕೈಗಾರಿಕೆ, ಸ್ವಯಂ ಉದ್ಯೋಗಾವಕಾಶಯೋಜನೆ, ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹೆಚ್ಚೆಚ್ಚು ಹಣವನ್ನು ಒದಗಿಸಬೇಕು. ವಿಶ್ವ ಕನ್ನಡ ಸಮ್ಮೇಳನದಲ್ಲಿ ಅಣು ಕನ್ನಡಿಗರಿಗೆ ಇಲ್ಲಿ ಉಳಿಯುವಂತೆ ವಾತಾವರಣ ನಿರ್ಮಾಣವಾಗಬೇಕಾಗಿದೆ. ನಮ್ಮ ಕನ್ನಡಿಗರು ನೀರು–ಮೇವು–ಕೂಳಿಲ್ಲದೆ ಬೇರೆ ರಾಜ್ಯಗಳಿಗೆ ಗುಳೇಹೋಗುತ್ತಿರುವಾಗ, ನಾವು ಟಿಬೇಟದ ನಿರ್ಗತಿಕರನ್ನು ಇಲ್ಲಿ ಪೋಷಿಸುತ್ತೇವೆ. ಮನೆಯ ಕೂಸಿಗೆ ಗಂಜಿಯಾದ ಮೇಲೆ ಬೇರೆ ಕೂಸಿಗೆ ಹಾಲನ್ನು ಕೂಡೋಣ. ಬ್ಯಾಂಕುಗಳು ಮಾಡಿದ್ದಕ್ಕಿಂತ ಮಾಡಬೇಕಾದದ್ದು ಹೆಚ್ಚಿದೆ. ಮಾಡುವ ಸಾಮರ್ಥ್ಯ ಅವುಗಳಿಗಿದೆ. ಅವು ಮಾಡುವಂತೆ. ಅವುಗಳಿಗೆ ಒಳ್ಳೇ ಪರಿಸರದ ನಿರ್ಮಾಣವನ್ನು ಕಲ್ಪಿಸಿಕೊಡುವದು ಸರಕಾರದ ಜೊತೆಗೆ ಬ್ಯಾಂಕು ಬಳಕೆದಾರರದೂ ಇದೆ.

● ● ●

ಗಳಿಗೆ ಎಲ್ಲಾ ರೀತಿಯ ಸೇವಾಸೌಕರ್ಯವನ್ನು ಬ್ಯಾಂಕ್ ನೀಡುತ್ತಲಿದೆ.

### ಠೇವಣಿ ಸಂಗ್ರಹ

ಬ್ಯಾಂಕಿನ ಮುಖ್ಯ ಉದ್ದೇಶಗಳಲ್ಲೊಂದಾದ ಕಡಿಮೆ ಬಡ್ಡಿ ದರದಲ್ಲಿ ಗ್ರಾಮೀಣ ಜನತೆಗೆ ಹೆಚ್ಚು ಸಾಲ ನೀಡಿ ಹಾಗೂ ಕಾಲಾವಧಿ ಮೂರು ವರ್ಷಗಳಿಗಿಂತ ಕಡಿಮೆ ಇರುವ ಉಳಿತಾಯ ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇ. ಅರ್ಧದಷ್ಟು ಹೆಚ್ಚು ಬಡ್ಡಿ ನೀಡುತ್ತದೆ. ಬ್ಯಾಂಕಿನ ಠೇವಣಿ ಸಂಗ್ರಹ ಹಾಗೂ ಠೇವಣಿದಾರರ ಸಂಖ್ಯೆ ಈ ಕೆಳಕಂಡತಿದೆ :

| ಠೇವಣಿ ಸಂಗ್ರಹ | | | ಠೇವಣಿದಾರರ ಸಂಖ್ಯೆ |
|---|---|---|---|
| 1981ರ ಅಂತ್ಯಕ್ಕೆ | ರೂ. 33.33 | ಲಕ್ಷ | 7,001 |
| 1982ರ ಅಂತ್ಯಕ್ಕೆ | " 145.42 | ಲಕ್ಷ | 41,052 |
| 1983ರ ಅಂತ್ಯಕ್ಕೆ | " 286.64 | ಲಕ್ಷ | 77,480 |
| 1984ರ ಅಂತ್ಯಕ್ಕೆ | " 459.00 | ಲಕ್ಷ | 1,26.464 |
| 1985 ಜೂನ್ ಅಂತ್ಯಕ್ಕೆ | 471.86 | ಲಕ್ಷ | 1,55,956 |

1985ರ ಅಂತ್ಯಕ್ಕೆ ಬ್ಯಾಂಕ್ 650 ಲಕ್ಷ ರೂ.ಗಳಿಗೆ ತಲುಪುವ ಗುರಿ ಇಟ್ಟುಕೊಳ್ಳಲಾಗಿದೆ.

### ಸಾಲಗಳ ವಿವರ

ಚಿತ್ರದುರ್ಗ ಗ್ರಾಮೀಣ ಬ್ಯಾಂಕಿನಿಂದ ಎಲ್ಲಾ ತರಹದ ಸಾಲಗಳು ಲಭ್ಯವಿದ್ದು, ಇಲ್ಲಿಯತನಕ ನೀಡಲಾದ ಸಾಲಗಳ ವಿವರಗಳು ಈ ಮುಂದಿನಂತಿವೆ :

| ವರ್ಷ | ವಿತರಿಸಿದ ಮೊತ್ತ | | ಫಲಾನುಭವಿಗಳ ಸಂಖ್ಯೆ |
|---|---|---|---|
| 1981ರ ಅಂತ್ಯಕ್ಕೆ | ರೂ.5.80 | ಲಕ್ಷ | 415 |
| 1982ರ ಅಂತ್ಯಕ್ಕೆ | 136.23 | " | 9,356 |
| 1983ರ ಅಂತ್ಯಕ್ಕೆ | 338.24 | " | 23,061 |
| 1984ರ ಅಂತ್ಯಕ್ಕೆ | 809.00 | " | 48,583 |
| ಪ್ರಾರಂಭ ವರ್ಷದಿಂದ 1985ರ ಜೂನ್ ಅಂತ್ಯಕ್ಕೆ | 1,068.26 | " | 61,003 |

1985ರ ಅಂತ್ಯಕ್ಕೆ 1,500 ಲಕ್ಷ ರೂ.ಗಳಿಗೆ ತಲುಪುವ ಗುರಿ ಇಟ್ಟುಕೊಳ್ಳಲಾಗಿದೆ.

ಬ್ಯಾಂಕಿನ ಸಾಲ ವಿತರಣಾ ಧೋರಣೆಯು ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಧ್ಯೇಯೋದ್ದೇಶಗಳಿಗನುಸಾರವಾಗಿ, ಅಂದರೆ ಕೃಷಿ, ವ್ಯಾಪಾರ, ವಾಣಿಜ್ಯ, ಕೈಗಾರಿಕೆ ಮತ್ತು ಇತರ ಉತ್ಪಾದನ ಚಟುವಟಿಕೆಗಳಿಗೆ ಅನುಗುಣವಾಗಿದೆ. ಚಿಕ್ಕ, ಅತಿ ಚಿಕ್ಕ ರೈತರು, ಕೃಷಿ ಕಾರ್ಮಿಕರು, ಕುಶಲಕರ್ಮಿಗಳು ಹಾಗೂ ಉದ್ದಿಮೆದಾರರಿಗೆ ಆರ್ಥಿಕ ನೆರವು ಒದಗಿಸುವ ಕಾರ್ಯ ಭರದಿಂದ ಸಾಗಿದೆ. ಕೃಷಿ ಹೊರತಾದ ಸಾಲಗಳಾದ ಸಣ್ಣ ಕೈಗಾರಿಕೆಗೆ, ಚಿಲ್ಲರೆ ವ್ಯಾಪಾರಿಗಳಿಗೆ, ವೃತ್ತಿಪರ, ಸ್ವಯಂ ಉದ್ಯೋಗ ಹಾಗೂ ಇತರೆಯವರಿಗೆ ಆರ್ಥಿಕವಾಗಿ ಮುಂದುವರಿಯಲು ಹಿಂದುಳಿದ ಮತ್ತು ನಿರ್ಲಕ್ಷಿತ ಜನತೆಗೆ ಸುಮಾರು ಒಂದೂವರೆ ಕೋಟಿ ರೂಪಾಯಿಗಳವರೆಗೆ ಸಾಲ ನೀಡಿ ವಿಕ್ರಮ ಸಾಧಿಸಿದೆ.ಈ ಬ್ಯಾಂಕ್ ಸಾಲವಸೂಲಿ ಮಾಡುವುದರಲ್ಲಿಯೂ ಮೇಲುಗೈ ಪಡೆದಿದೆ. ಅಂದರೆ ಶೇಕಡ 70ರಷ್ಟು ಸಾಲ ವಸೂಲಿ ಮಾಡಿದೆ. ಇದಲ್ಲದೆ ರಾಜ್ಯ ಸರ್ಕಾರದ ಯೋಜನೆಗಳಾದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ಭಿನ್ನಕ ಬಡ್ಡಿ ದರದ ಯೋಜನೆ, ಅಂತ್ಯೋದಯ, 20 ಅಂಶಗಳ ಕಾರ್ಯಕ್ರಮ, ಖಾದಿ ಮತ್ತು ಗ್ರಾಮೋದ್ಯೋಗ ವಿಶೇಷ ಯೋಜನೆ, ಗ್ರಾಮ ಕೈಗಾರಿಕೆ, ಕುಶಲ ಕೈಗಾರಿಕೆ ಇವುಗಳಿಗೆ ಸಾಲ ನೀಡುವಲ್ಲಿ ಬ್ಯಾಂಕ್ ದಿಟ್ಟ ಹೆಜ್ಜೆ ಇಟ್ಟಿದೆ. ಬೇರೆ ಬೇರೆ ಯೋಜನೆಗಳಿಂದ ದುರ್ಬಲ ವರ್ಗಗಳಿಗೆ ಸಹಾಯವಾಗುವಂತಹ ಎಲ್ಲಾ ಯೋಜನೆಗಳಿಗೂ ಬ್ಯಾಂಕ್ ಆದ್ಯತೆ ನೀಡುತ್ತಲಿದೆ.

### ಸಣ್ಣ ನೀರಾವರಿ ಸಾಲಗಳು

ಸಾಲ ವಿತರಣೆಯಲ್ಲಿ ಸಣ್ಣ ನೀರಾವರಿ ಯೋಜನೆಗೆ ಹೆಚ್ಚಿನ ಆದ್ಯತೆಯನ್ನು ಬ್ಯಾಂಕಿನ ವತಿಯಿಂದ ನೀಡಲಾಗುತ್ತಿದೆ. ಏತ ನೀರಾವರಿ ಯೋಜನೆ, ಕೊಳವೆ ಬಾವಿ, ತೋಡು ಬಾವಿ, ಪಂಪುಸೆಟ್, ಪೈಪ್‌ಲೈನ್, ಬಾವಿ ಆಳಪಡಿಸುವುದಕ್ಕೆ ಹಾಗೂ ಇನ್ನಿತರ ಎಲ್ಲಾ ತರಹದ ಸಣ್ಣ ನೀರಾವರಿಗೆ ಸಂಬಂಧಪಟ್ಟ ಸಾಲಗಳನ್ನು ನೀಡಲಾಗುತ್ತಿದೆ. ಬ್ಯಾಂಕಿನ ಶಾಖೆಗಳಾದ ಶಿವಗಂಗೆ, ಹಿರೇಗುಂಟನೂರು, ಚಿತ್ರದುರ್ಗ,ಕಂದನಕೋವಿ, ಚಿಕ್ಕಬೆನ್ನೂರು, ಹೊರಕೆರೆ ದೇವರಪುರ, ಸಿರಿಗೆರೆ ಹಾಗೂ ಇನ್ನೂ ಅನೇಕ ಶಾಖೆಗಳು ಈ ಯೋಜನೆಗೆ ಅತಿ ಹೆಚ್ಚಿನ ಮಹತ್ವ ನೀಡಿ ವಿಕ್ರಮ ಸಾಧಿಸಿವೆ. ಚಿತ್ರದುರ್ಗ ಜಿಲ್ಲೆ ಗ್ರಾಮೀಣ ಬ್ಯಾಂಕಿನ ಸಹಾಯದಿಂದ ಅತಿ ಹೆಚ್ಚು ಎಕರೆ ನೀರಾವರಿ ಸೌಲಭ್ಯವನ್ನು ಪಡೆದಿದೆ. ಸಣ್ಣ ನೀರಾವರಿ ಯೋಜನೆಯಲ್ಲಿ ಯಲ್ಲಿಯೇ ಇದೊಂದು ಮೈಲುಗಲ್ಲಾಗಿದೆ. ಪ್ರಕೃತಿ ವಿಕೋಪದಿಂದ ತತ್ತರಿಸಿದ್ದ ಈ ಜಿಲ್ಲೆಯ ಸಾಗುವಳಿ ಪ್ರದೇಶ ಇಂದು ಹಚ್ಚ ಹಸಿರಿನ ತವರಾಗಿದೆ. ಚಿತ್ರದುರ್ಗ ಗ್ರಾಮೀಣ ಬ್ಯಾಂಕಿನ ವತಿಯಿಂದ ಸುಮಾರು 6,300 ಎಕರೆ ಭೂಮಿ ಇಂದು ನೀರಾವರಿ ಸೌಲಭ್ಯವನ್ನು ಪಡೆದಿದೆ. ಈ ಯೋಜನೆಯಲ್ಲಿ 1985ರ ಜೂನ್ ಅಂತ್ಯಕ್ಕೆ 1,959 ಫಲಾನುಭವಿಗಳನ್ನೊಳಗೊಂಡು 160.14 ಲಕ್ಷ ರೂ.ಗಳನ್ನು ವಿತರಿಸಲಾಗಿದೆ.

ಬ್ಯಾಂಕು ನೀಡಿದ ಸಣ್ಣ ನೀರಾವರಿ ಸಾಲ

| ವಿವರ | ಖಾತೆಗಳ ಸಂಖ್ಯೆ | ಮಂಜೂರಾದ ಸಾಲ |
|---|---|---|
| 1 ಪಂಪುಸೆಟ್ಟಿಗಾಗಿ (ಪಂಪ್‌ಮನೆ ಸೇರಿ) | 1,039 | ರೂ. 94.35 ಲಕ್ಷ |
| 2 ಕೊಳವೆ ಬಾವಿಗಾಗಿ | 418 | ರೂ. 30.69 ಲಕ್ಷ |
| 3 ತೋಡು ಬಾವಿಗಾಗಿ | 125 | ರೂ. 9.93 ಲಕ್ಷ |
| 4 ಪೈಪ್‌ಲೈನ್‌ಗಾಗಿ | 88 | ರೂ. 6.72 ಲಕ್ಷ |
| 5 ಬಾವಿ ಆಳಪಡಿಸುವುದು ಮತ್ತು ಅಚ್ಚುಕಟ್ಟಿಗಾಗಿ | 289 | ರೂ. 18.45 ಲಕ್ಷ |

ಚಿತ್ರದುರ್ಗ ಜಿಲ್ಲೆಯಲ್ಲಿ ಸರ್ಕಾರದ ವತಿಯಿಂದ ಪ್ರಾರಂಭಿಸಿರುವ ಹತ್ತು ಹಲವಾರು ಯೋಜನೆಗಳಲ್ಲಿ ಈ ಬ್ಯಾಂಕಿನ ಪಾತ್ರ ಸಿಂಹಪಾಲಿನದು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ಚಿತ್ರದುರ್ಗ ಗ್ರಾಮೀಣ ಬ್ಯಾಂಕಿನಿಂದ ನೀಡಲಾದ ಸಾಲಗಳ ವಿವರ ಈ ರೀತಿ ಇದೆ:

| ವರ್ಷ | ಫಲಾನುಭವಿಗಳ ಸಂಖ್ಯೆ | ವಿತರಿಸಿದ ಮೊತ್ತ |
|---|---|---|
| 1981–82 | 2,019 | ರೂ. 47.18 ಲಕ್ಷ |
| 1982–83 | 1,273 | ರೂ. 30.24 ಲಕ್ಷ |
| 1983–84 | 2,360 | ರೂ. 48.00 ಲಕ್ಷ |
| 1984–85 | 2,875 | ರೂ. 77.44 ಲಕ್ಷ |
| ಪ್ರಾರಂಭ ವರ್ಷದಿಂದ 1985ರ ಜೂನ್ ಅಂತ್ಯದವರೆಗೆ | 8,537 | ರೂ. 203.15 ಲಕ್ಷ |

ಈ ಯೋಜನೆಯ ಮೂಲಕ 1984–85ರಲ್ಲಿ 27 ಲಕ್ಷ ರೂ.ಗಳನ್ನು ಸಹಾಯ ಧನವನ್ನಾಗಿ ಹಾಗೂ 81 ಲಕ್ಷ ರೂ.ಗಳನ್ನು ಸಾಲದ ರೂಪದಲ್ಲಿ ಒದಗಿಸಲಾಗಿದೆ. ಈ ಯೋಜನೆಯಡಿಯಲ್ಲಿ ಲಾಭ ಪಡೆದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದವರ ಸಂಖ್ಯೆ ಸುಮಾರು 3,000 ಆಗಿದ್ದು, ಅವರು ಸುಮಾರು 50 ಲಕ್ಷ ರೂ.ಗಳನ್ನು ಪಡೆದಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಸಾಲ ನೀಡುವಲ್ಲಿ ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ ಸರ್ಕಾರದ ನಿಯಮಾವಳಿಗಳನ್ನು ಪಾಲಿಸಿದೆ. ಇದಲ್ಲದೆ ಖಾದಿ ಘಟಕಗಳಿಗೆ ಧನಸಹಾಯವನ್ನು ಕೂಡ ಒದಗಿಸಲಾಗಿದೆ.

ರಾಜ್ಯ ಸರ್ಕಾರದ ಕೆಲವು ಯೋಜನೆಗಳಿಗೆ ನೀಡಿದ ಸಾಲಗಳ ವಿವರಗಳು ಈ ಕೆಳಕಂಡಂತಿವೆ:

| ಯೋಜನೆ | ಖಾತೆಗಳ ಸಂಖ್ಯೆ | ವಿತರಿಸಿದ ಮೊತ್ತ |
|---|---|---|
| 1 ರೇಷ್ಮೆ ಅಭಿವೃದ್ಧಿ ಯೋಜನೆ | 710 | ರೂ. 13.05 ಲಕ್ಷ |
| 2 ಅಂತ್ಯೋದಯ ಯೋಜನೆ | 550 | ರೂ. 17.56 ಲಕ್ಷ |
| 3 ತೆಂಗು ಅಭಿವೃದ್ಧಿ ಯೋಜನೆ | 155 | ರೂ. 7.32 ಲಕ್ಷ |
| 4 ಬಯೋಗ್ಯಾಸ್‌ಗೆ | 11 | ರೂ. 0.84 ಲಕ್ಷ |
| 5 ಬಳಕೆ ಸಾಲಕ್ಕೆ | — | ರೂ. 1.50 ಲಕ್ಷ |
| 6 ವಿಶೇಷ ಘಟಕ ಯೋಜನೆ | 116 | ರೂ. 9.98 ಲಕ್ಷ |
| 7 ನೂರು ಬಾವಿ ಯೋಜನೆಗೆ | 605 | ರೂ. 78.00 ಲಕ್ಷ |
| 8 ವಿಶೇಷ ಪಶುಸಂಗೋಪನ ಕಾರ್ಯಕ್ರಮ | 180 | ರೂ. 6.01 ಲಕ್ಷ |
| 9 ಜೀತವಿಮುಕ್ತ ಯೋಜನೆಯಡಿಯಲ್ಲಿ | 104 | ರೂ. 1.25 ಲಕ್ಷ |
| 10 ವಿಭಿನ್ನ ಬಡ್ಡಿದರದ ಯೋಜನೆಯಲ್ಲಿ | 2,005 | ರೂ. 14.60 ಲಕ್ಷ |
| 11 ವೀಳ್ಯದೆಲೆ ಯೋಜನೆಯಡಿಯಲ್ಲಿ | — | ರೂ. 0.40 ಲಕ್ಷ |

## ಜಿಲ್ಲಾ ವಾರ್ಷಿಕ ಯೋಜನೆ

ಜಿಲ್ಲೆಯ ವಾರ್ಷಿಕ ಯೋಜನೆಯಲ್ಲಿ ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ 280 ಲಕ್ಷ ರೂ.ಗಳ ಗುರಿಯನ್ನು ಹೊಂದಿದ್ದು, ಇಲ್ಲಿಯವರೆಗೆ 613 ಲಕ್ಷ ರೂ.ಗಳನ್ನು ವಿತರಣೆ ಮಾಡಲಾಗಿದೆ (ಶೇ. 219).

ಈ ಯೋಜನೆಯಲ್ಲಿ ವಿತರಣೆ ಮಾಡಿದ ಸಾಲವನ್ನು ಈ ಕೆಳಕಂಡಂತೆ ವಿಂಗಡಿಸಲಾಗಿದೆ:

| | ವಿತರಿಸಿದ ಮೊತ್ತ | ಶೇಕಡವಾರು |
|---|---|---|
| ವ್ಯವಸಾಯ ಕ್ಷೇತ್ರಕ್ಕೆ | ರೂ. 445.00 ಲಕ್ಷ | 222 |
| ಸಣ್ಣ ಪ್ರಮಾಣದ ಕೈಗಾರಿಕೆಗೆ | ರೂ. 15.00 ಲಕ್ಷ | 79 |
| ಇತರೆ ಎಲ್ಲಾ ಸಾಲಗಳಿಗೆ | ರೂ. 152.00 ಲಕ್ಷ | 254 |

ಇವುಗಳಲ್ಲದೆ, ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆಯವರು ಪ್ರವರ್ತಿಸಿದ ಸಣ್ಣ ನೀರಾವರಿ ಯೋಜನೆಗೆ ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ ಸಹಾಯ ನೀಡುತ್ತಲಿದೆ. ಇಲ್ಲಿಯ ತನಕ ಸುಮಾರು ಎರಡು ಲಕ್ಷ ರೂಪಾಯಿಗಳನ್ನು ವಿತರಿಸಲಾಗಿದೆ. ಎಲ್ಲಾ ವಿಧದ ಸಾಲಗಳನ್ನೊಳಗೊಂಡಂತೆ 1985ರ ಜೂನ್ ಅಂತ್ಯಕ್ಕೆ ಸುಮಾರು 10 ಸಾವಿರಕ್ಕೂ ಹೆಚ್ಚು ಪರಿಶಿಷ್ಟ ಜಾತಿಪಂಗಡದವರು ಸುಮಾರು 1.60 ಕೋಟಿ ರೂ.ಗಳ ಲಾಭ ಪಡೆದಿದ್ದಾರೆ. ಆದ್ಯತೆ ವರ್ಗಕ್ಕೆ ಶೇಕಡ 95ರಷ್ಟು ಸಾಲವನ್ನು ನೀಡಲಾಗಿದೆ.

ಗ್ರಾಮಪ್ರದೇಶದಲ್ಲಿ ಮಾತ್ರವಲ್ಲದೆ ನಗರ ಪ್ರದೇಶದಲ್ಲಿರುವ ಕಡುಬಡವರನ್ನು ಗುರುತಿಸಿ, ಅವರಿಗೆ ಲಘುವಾಹನಗಳ ಸಾಲವನ್ನು ಬ್ಯಾಂಕಿನಿಂದ ನೀಡಲಾಗುತ್ತಿದೆ. ಚಿತ್ರದುರ್ಗ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಲಘುವಾಹನಗಳ ಸಾಲವನ್ನು ನೀಡಿ ವಿಕ್ರಮ ಸಾಧಿಸಿದೆ. ಇಲ್ಲಿಯತನಕ 11 ಲಕ್ಷ ರೂ.ಗಳನ್ನು ವಿತರಿಸಲಾಗಿದೆ.



### ನಿರುದ್ಯೋಗಿ ವಿದ್ಯಾವಂತರಿಗೆ ಸ್ವ–ಉದ್ಯೋಗ ಯೋಜನೆ

ಈ ಯೋಜನೆಯನ್ನು ಪ್ರಸ್ತುತ ವರ್ಷಕ್ಕೂ ಮುಂದುವರಿಸಲಾಗಿದೆ. ಮಾರ್ಚ್ 31, 1986ರೊಳಗೆ ಬೇರೆ ಬೇರೆ ರಾಜ್ಯಗಳು ಸಾಧಿಸಬೇಕಾದ ಗುರಿಗಳನ್ನು, ನಿಗದಿಪಡಿಸಲಾಗಿದೆ. ಅದರಂತೆ ಕರ್ನಾಟಕದಲ್ಲಿ 12,400 ಫಲಾನುಭವಿಗಳಿಗೆ ಈ ಯೋಜನೆಯಲ್ಲಿ ಧನ ಸಹಾಯ ಮಾಡಬೇಕಾಗಿದೆ.

### ಚೆಕ್ಕುಗಳ ತೀರುವಳಿ: ಹರಿಕಾರ ಸೇವೆ (ಕೂರಿಯರ್ ಸರ್ವಿಸ್)

ಪರಸ್ಥಳದ ಚೆಕ್ಕುಗಳ ಶೀಘ್ರ ವಸೂಲಾತಿ ಮತ್ತು ವಿಳಂಬವನ್ನು ಕಡಿಮೆ ಮಾಡುವ ದೃಷ್ಟಿಯಿಂದ ಪ್ರತಿಯೊಂದು ಬ್ಯಾಂಕೂ ತಮ್ಮದೇ ಆದ ಹರಿಕಾರ ಸೇವೆಯನ್ನು ಸಂಘಟಿಸಿಕೊಳ್ಳುವ ಸಾಧ್ಯತೆಯನ್ನು ಪರಿಶೀಲಿಸುವಂತೆ ಹಣಕಾಸು ಮಂತ್ರಾಲಯದ ಬ್ಯಾಂಕಿಂಗ್ ವಿಭಾಗ ಬ್ಯಾಂಕುಗಳನ್ನು ಕೋರಿದೆ. ಇದಕ್ಕೆ ಪೂರಕವಾಗಿ ಭಾರತೀಯ ಬ್ಯಾಂಕುಗಳ ಸಂಘ 30 ಕೇಂದ್ರಗಳಿಗೆ ತನ್ನದೇ ಆದ ಹರಿಕಾರ ಸೇವೆಯನ್ನು ವಿಸ್ತರಿಸಲಿದೆ, ಹಾಗೂ ಎಲ್ಲ ಬ್ಯಾಂಕ್ ಶಾಖೆಗಳಿಗೆ ಪಿನ್‌ಕೋಡ್ ನಿರ್ದೇಶಿಕೆಯನ್ನು ಸಿದ್ಧಪಡಿಸಲಿದೆ.

# ಸಾಮಾಜಿಕ ಬ್ಯಾಂಕಿಂಗ್ ಮತ್ತು ಗ್ರಾಹಕ

**ಬಿ. ಎಸ್. ಚಂದ್ರಶೇಖರ**

ಬ್ಯಾಂಕುಗಳ ಸಾಮಾಜಿಕ ನಿಯಂತ್ರಣದ ಪ್ರಶ್ನೆ 1967ರಲ್ಲಿ ಚರ್ಚೆಯ ವಿಷಯವಾಗಿದ್ದು ಇಂದು ಹಳೆಯದಾಗಿದೆ. ಬ್ಯಾಂಕ್ ಶಾಖೆಗಳ ಸಂಖ್ಯೆಯಲ್ಲಿ, ಬ್ಯಾಂಕ್ ಉದರಿಯ ಗಾತ್ರದಲ್ಲಿ ಮತ್ತು ಮುಖ್ಯವಾಗಿ—ಉದರಿಯ ಸ್ವರೂಪದಲ್ಲಿ ಗಮನಾರ್ಹವಾದ ಬದಲಾವಣೆಗಳುಂಟಾಗಿವೆ. ಭಾರತದಲ್ಲಿ ಇಂದು ಬ್ಯಾಂಕಿಂಗ್ ಎಂದರೆ 'ಸಾಮಾಜಿಕ ಬ್ಯಾಂಕಿಂಗ್' ಎಂದೇ ಅರ್ಥ.

### ಸಾಮಾಜಿಕ ಬ್ಯಾಂಕಿಂಗಿನ ಅರ್ಥವ್ಯಾಪ್ತಿ

'ಸಾಮಾಜಿಕ ಬ್ಯಾಂಕಿಂಗ್' ಎಂದರೇನೆಂದು ವಿವರಿಸುವ ಅಗತ್ಯ ಇಲ್ಲವೆಂಬುದು ಮೇಲಿನ ಮಾತುಗಳಿಂದ ಅರ್ಥವಾಗುತ್ತದೆ. ಆದರೂ, ಸಾಮಾಜಿಕ ಬ್ಯಾಂಕಿಂಗ್ ಕುರಿತ ಸ್ಥೂಲ ಕಲ್ಪನೆಯನ್ನು ಹೀಗೆ ಮಾಡಿಕೊಳ್ಳಬಹುದು :

1 ವಿಸ್ತಾರವಾದ ಶಾಖೆಗಳ ಹರವು ಮತ್ತು ಆ ಮೂಲಕ ಎಲ್ಲ ವರ್ಗಗಳ ಎಲ್ಲ ಜನರಿಗೂ ಬ್ಯಾಂಕಿಂಗ್ ಸೇವೆಗಳ ವಿಸ್ತರಣೆ.

2 ವರ್ಗ ಬ್ಯಾಂಕಿಂಗಿನಿಂದ ಸಾಮೂಹಿಕ ಬ್ಯಾಂಕಿಂಗಿನತ್ತ ಒಲವು. ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ, ಹಿಂದುಳಿದ ಜಾತಿಗಳಿಗೆ, ಸಣ್ಣಪ್ರಮಾಣದ ಕೈಗಾರಿಕೆ/ವ್ಯವಸಾಯ/ಉದ್ಯಮ ಮುಂತಾದ ಚಟುವಟಿಕೆಗಳಲ್ಲಿ ನೆರವು ನೀಡುವಲ್ಲಿ ಆದ್ಯತೆ.

3 ಗ್ರಾಮೀಣ ಉದರಿಗೆ ಪ್ರಾಶಸ್ತ್ಯ.

4 ಸಾಲಗಾರ ನೀಡಬಹುದಾದ 'ಭದ್ರತೆ'ಯನ್ನು ದೃಷ್ಟಿಯಲ್ಲಿರಿಸಿಕೊಳ್ಳುವ ಬದಲು ಅವನ ಅಗತ್ಯಗಳನ್ನು ಮುಖ್ಯವಾಗಿ ಗಮನಿಸುವುದು.

ಕಳೆದ ಮೂರು ದಶಕಗಳಲ್ಲಿ ಬ್ಯಾಂಕುಗಳ ಧೋರಣೆ ಇಷ್ಟೊಂದು ವ್ಯಾಪಕವಾಗಿ ಬದಲಾದುದಕ್ಕೆ ರಾಜಕೀಯವಾಗಿ ಪ್ರೇರಿತವಾದ 'ರಾಷ್ಟ್ರೀಕರಣ'ವೂ ಒಂದು ಪ್ರಮುಖ ಕಾರಣ ಎನ್ನಬಹುದು. ಬ್ಯಾಂಕುಗಳ ಒಡೆತನ ಮತ್ತು ವ್ಯವಸ್ಥಾಪನಗಳನ್ನು ಪರಸ್ಪರ ಬೇರ್ಪಡಿಸಿದ್ದು ರಾಷ್ಟ್ರೀಕರಣದ ಒಂದು ಮುಖ್ಯ ಸಾಧನೆ. ಪ್ರಮುಖ ಬ್ಯಾಂಕುಗಳ ಒಡೆತನ ಸರಕಾರಕ್ಕೆ ಸೇರದಿದ್ದರೆ ಇಂದು ಪರಿಸ್ಥಿತಿ ಬೇರೆಯಾಗಿಯೇ ಇರುತ್ತಿತ್ತು. ಬ್ಯಾಂಕ್ ಸೇವೆಗಳನ್ನು ಮೇಲ್ವರ್ಗಗಳಿಗೆ ಸೀಮಿತಗೊಳಿಸುವ ಬದಲು ಆರ್ಥಿಕವಾಗಿ ಹಿಂದುಳಿದವರಿಗೆ ಮತ್ತು ದುರ್ಬಲ ವರ್ಗಗಳಿಗೆ ಸಾಮಾಜಿಕ ನ್ಯಾಯ ಒದಗಿಸಲು ಬಳಸಲಾಗುತ್ತಿರುವುದು ಬ್ಯಾಂಕಿಂಗಿಗೆ ಒಂದು ಹೊಸ ಆಯಾಮ ದೊರಕಿಸಿ ಕೊಟ್ಟಿದೆ.

### ಗ್ರಾಹಕ

'ಸಾಮಾಜಿಕ ಬ್ಯಾಂಕಿಂಗ್' ಎಂದರೇನೆಂದು ಸ್ಪಷ್ಟವಾದಂತಾಯಿತು. ಇನ್ನು 'ಗ್ರಾಹಕ' ಎಂದರೆ ಯಾರು ? ಎಂಬ ಚರ್ಚೆಯ ವಿವರಗಳಿಗೆ ಹೋಗದೆ ಬ್ಯಾಂಕಿನ ಎಲ್ಲ ರೀತಿಯ ಠೇವಣಿದಾರರನ್ನೂ ಸಾಲಗಾರರನ್ನೂ ಈ ಲೇಖನದಲ್ಲಿ ಗ್ರಾಹಕರೆಂದು ಪರಿಭಾವಿಸಲಾಗಿದೆ.

ಬ್ಯಾಂಕಿಂಗಿನಲ್ಲಿ ಇತ್ತೀಚೆಗೆ ತಲೆಯೆತ್ತುತ್ತಿರುವ ಧೋರಣೆಗಳು ಮತ್ತು ಬ್ಯಾಂಕ್ ಗ್ರಾಹಕರ ಮೇಲೆ ಅವುಗಳ ಪ್ರಭಾವ ಇವುಗಳನ್ನು ಕುರಿತು ಈ ಲೇಖನದಲ್ಲಿ ಚಿಂತಿಸಲಾಗಿದೆ. ಜತೆಗೇ ಬ್ಯಾಂಕುಗಳ ಲಾಭಪ್ರದತೆಯ ಸಮಸ್ಯೆ ಹಾಗೂ ಪರಿಹಾರ ಕುರಿತಂತೆ ಪ್ರಸ್ತಾಪಿಸಿ ಬ್ಯಾಂಕುಗಳ ಸಾಲ ನೀಡಿಕೆ ಹಾಗೂ ಯೋಜನೆಗಳನ್ನು ಕುರಿತ ವಾಸ್ತವಾಂಶಗಳನ್ನು ಬಯಲಿಗೆಳೆಯಲಾಗಿದೆ. ವಿಷಯದ ವ್ಯಾಪ್ತಿ ಬಹಳವಾದುದರಿಂದ ಯೋಜನೆಗಳ ಸ್ವರೂಪ, ಅಂಕಿ-ಅಂಶಗಳೇ ಮೊದಲಾದ ವಿವರಗಳ ಗೊಡವೆಗೆ ಹೋಗದೆ ಮೂಲಭೂತ ಸಮಸ್ಯೆಗಳನ್ನು ಸ್ಥೂಲವಾಗಿ ಚರ್ಚಿಸಲಾಗಿದೆ.

### ಠೇವಣಿದಾರನ 100 ರೂಪಾಯಿ

ತಾನು ಬ್ಯಾಂಕಿಗೆ ನೀಡಿದ ರೂ. 100 ತಗಾದೆ/ಅವಧಿ ಠೇವಣಿಯನ್ನು ಬ್ಯಾಂಕು ಹೇಗೆ ವಿನಿಯೋಗಿಸುತ್ತದೆ ಎಂಬುದನ್ನು ಕುರಿತ ಗ್ರಾಹಕನ ಪ್ರಶ್ನೆಗೆ (ದೇಶದ ಹಣ ನೀತಿಗೆ ಅನುಗುಣವಾಗಿ, ಸದ್ಯದಲ್ಲಿ) ಹೀಗೆ ಉತ್ತರಿಸಬೇಕಾಗುತ್ತದೆ :

| | | |
|---|---|---|
| ನಗದು ಮೀಸಲು (ರಿಸರ್ವ್ ಬ್ಯಾಂಕ್) | ರೂ. | 12 |
| ಪರಿನಿಯತ ದ್ರವತ್ವ ಮೀಸಲು | ರೂ. | 37 |
| ಆಹಾರ ಧಾನ್ಯ ಸಂಗ್ರಹಣ ಉದರಿ | ರೂ. | 5 |
| ಆದ್ಯತಾ ವಲಯಗಳಿಗೆ ಮುಂಗಡಗಳು | ರೂ. | 21 |
| ಉಳಿದ ಸಾಲಗಳು ('ವಾಣಿಜ್ಯ ದರದಲ್ಲಿ' ನೀಡಬಹುದಾದ ಸಾಲಗಳು) | ರೂ. | 25 |
| | ರೂ. | 100 |

ಗ್ರಾಹಕನಿಗೆ ಸಂದಾಯವಾಗಬೇಕಾದ ನಿಯತಕಾಲಿಕ ಬಡ್ಡಿಯೂ ಈ ವಿನಿಯೋಜನೆಗಳಿಂದ ಉತ್ಪನ್ನವಾಗಬೇಕಾಗುತ್ತದೆ. ಈ ವಿನಿಯೋಜನೆಗಳ ಮೇಲೆ ಬ್ಯಾಂಕು ಗಳಿಸುವ ಪ್ರತಿಫಲವನ್ನು ಗಮನಿಸಿದರೆ ಯಾವ ಠೇವಣಿದಾರನಿಗೂ ಸಂತೋಷವಾಗಲಾರದು.

ನಗದು ಮೀಸಲು ಮತ್ತು ಪರಿನಿಯತ ದ್ರವತ್ವ ಮೀಸಲು ಇವುಗಳಿಗೆ ಶೇ. 10. ಆಹಾರಧಾನ್ಯ ಸಂಗ್ರಹಣ ಉದರಿಗೂ ಒಳ್ಳೆಯ ಪ್ರತಿಫಲವಿಲ್ಲ. ಇನ್ನು ಆದ್ಯತಾವಲಯ ಮುಂಗಡಗಳಲ್ಲಿ ಬಹುಪಾಲು ತೀರ ಕಡಮೆ ಬಡ್ಡಿದರಗಳವು (ಒಟ್ಟು ಮುಂಗಡಗಳ ಕನಿಷ್ಠ ಶೇ. 1ರಷ್ಟನ್ನು ಕಡ್ಡಾಯವಾಗಿ ನೀಡಬೇಕಾದ ಭಿನ್ನಕ ಬಡ್ಡಿದರ ಸಾಲಗಳು ಶೇ. 4 ಬಡ್ಡಿದರದವು). ಕೊನೆಗೆ ಉಳಿಯುವುದೆಂದರೆ 'ವಾಣಿಜ್ಯ ದರ'ಗಳಲ್ಲಿ ಬ್ಯಾಂಕುಗಳು ನೀಡಬಹುದಾದ 25 ರೂಪಾಯಿಯ ಮೇಲಿನ ಪ್ರತಿಫಲ. ಇಲ್ಲಿಯೂ ಗರಿಷ್ಠ ಬಡ್ಡಿದರವನ್ನು ಇತ್ತೀಚೆಗೆ ಶೇ. 18ರಿಂದ 17.5ಕ್ಕೆ ಇಳಿಸಲಾಗಿದೆ.

### ಹಣ ಎಷ್ಟು ಭದ್ರ ?

ಮೇಲೆ ಹೇಳಿದ್ದು ಪ್ರತಿಫಲದ ವಿಷಯವಾಯಿತು. ಠೇವಣಿದಾರನ ಮೂಲಧನದ ಪಾಡು ಏನಾಗುವುದೆಂಬುದು 'ಬ್ಯಾಂಕಿನ ಮುಂಗಡಗಳು ಎಷ್ಟು ಭದ್ರ ?' ಎನ್ನುವುದನ್ನು ಅವಲಂಬಿಸಿದೆ. ಈ ವಿಷಯ ಕುರಿತು ಚಿಂತಿಸತೊಡಗಿದರೆ ಕೆಲವು ಕುತೂಹಲಕಾರಿ ಅಂಶಗಳು ಅರಿವಿಗೆ ಬರುತ್ತವೆ.

ಬಿ. ಎಸ್. ಚಂದ್ರಶೇಖರ, ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, 560 002

ಆದ್ಯತಾವಲಯ ಸಾಲಗಳಲ್ಲಿ ಕೃಷಿ ಮತ್ತು ಸಣ್ಣಕೈಗಾರಿಕೆ/ಉದ್ಯಮ ಕ್ಷೇತ್ರಗಳಿಗೆ ನೀಡಲಾದ ಸಾಲಗಳು ಪ್ರಮುಖವಾದವು. ಕೃಷಿ ಮುಂಗಡಗಳಲ್ಲಿ ಕಟಬಾಕಿ ಹೆಚ್ಚುತ್ತಿದ್ದು ಸ್ವತಃ ಬ್ಯಾಂಕುಗಳೇ ಅಲ್ಲದೆ ರಿಸರ್ವ್ ಬ್ಯಾಂಕ್ ಮತ್ತು ಸರ್ಕಾರ ಕೂಡ ಈ ಕುರಿತು ಹೆಚ್ಚಿನ ಆತಂಕ ತೋರಿವೆ. ಹಳೇ ಸಾಲಗಳ ಮರುಪಾವತಿ ಹೆಚ್ಚದಿದ್ದರೆ ಕೃಷಿ ಉದರಿ ತೀವ್ರವಾಗಿ ಕುಂಠಿತಗೊಳ್ಳುವುದೆಂಬುದು ಕೇಂದ್ರ ಹಣಕಾಸು ಸಚಿವರ ಆತಂಕ.

ಕೃಷಿಯನ್ನುಳಿದು ಇನ್ನೊಂದು ಮುಖ್ಯ ಆದ್ಯತಾವಲಯ ಸಾಲವೆಂದರೆ ಸಣ್ಣ ಕೈಗಾರಿಕೆ ಸಾಲ. 'ವಾಣಿಜ್ಯ ದರ'ಗಳಲ್ಲಿ ಬ್ಯಾಂಕುಗಳು ನೀಡಿರುವ ಸಾಲಗಳಲ್ಲಿ ಬಹುಪಾಲು ಕೈಗಾರಿಕೆಗಳದ್ದೇ. ಕೈಗಾರಿಕೆಗಳಲ್ಲಿ ಅಸ್ವಸ್ಥತೆ ಹೆಚ್ಚುತ್ತಿದ್ದು ಅಸ್ವಸ್ಥ ಕೈಗಾರಿಕಾ ಘಟಕಗಳಲ್ಲಿ ತಮ್ಮ ಹಣ ಸ್ಥಗಿತವಾಗಿರುವುದು ಬ್ಯಾಂಕುಗಳಿಗೆ ಕಳವಳ ತಂದಿದೆ. 1983ರ ಜೂನ್ ತಿಂಗಳಲ್ಲಿದ್ದಂತೆ ಅಂಕಿ-ಅಂಶಗಳನ್ನು ನೋಡುವುದಾದರೆ 64,500 ಅಸ್ವಸ್ಥ ಕೈಗಾರಿಕಾ ಘಟಕಗಳಲ್ಲಿ ಸುಮಾರು ರೂ. 2,540 ಕೋಟಿ ಬ್ಯಾಂಕ್ ನಿಧಿ ಸ್ಥಗಿತಗೊಂಡಿತ್ತು. ಇದಕ್ಕಿಂತ ಕೇವಲ ಒಂದು ವರ್ಷಕ್ಕೆ ಮೊದಲು ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿನ ಅಸ್ವಸ್ಥ ಘಟಕಗಳು 27,000 ಇದ್ದು 1983ರ ಜೂನ್‌ನಲ್ಲಿ ಅವುಗಳ ಸಂಖ್ಯೆ 64,000ಕ್ಕೆ ಏರಿತೆಂದರೆ ಕೈಗಾರಿಕಾ ಅಸ್ವಸ್ಥತೆ ಸಮಸ್ಯೆಯ ತೀವ್ರತೆ ಅರ್ಥವಾದೀತು.

ಠೇವಣಿದಾರನ ಹಣ ಎಷ್ಟು ಭದ್ರ? ಎಂಬ ಪ್ರಶ್ನೆಗೆ ಮೇಲಿನ ಸಂಗತಿಗಳೇ ಉತ್ತರ ಹೇಳಿಯಾವು.

### ಗ್ರಾಹಕ ಸೇವೆ

ಶಾಖೆಗಳ ಸಂಖ್ಯೆ ಅಗಾಧವಾಗಿ ಹೆಚ್ಚಿದ್ದು ಬ್ಯಾಂಕಿಂಗ್ ಸೇವೆಗಳು ಹೆಚ್ಚು ಹೆಚ್ಚು ಜನರಿಗೆ ತಲುಪತೊಡಗಿವೆಯೆಂಬುದು ನಿಜ. ಆದರೆ ಬ್ಯಾಂಕುಗಳಲ್ಲಿ ತಮಗೆ ಲಭ್ಯವಾಗುವ ಸೇವೆಯ ಬಗೆಗೆ ಗ್ರಾಹಕರ ದೂರುಗಳು ಕಡಮೆಯೇನಿಲ್ಲ. ಬ್ಯಾಂಕುಗಳಿಂದ ಸಾರ್ವಜನಿಕರು/ಗ್ರಾಹಕರು ಹೆಚ್ಚು ಹೆಚ್ಚು ನಿರೀಕ್ಷಿಸುತ್ತಿರುವ ಹಿನ್ನೆಲೆಯಲ್ಲಿ ಬ್ಯಾಂಕ್‌ಉದ್ಯೋಗಿಗಳ ಜವಾಬ್ದಾರಿ/ಕೆಲಸದ ಒತ್ತಡಗಳು ಹೆಚ್ಚಿವೆ. ಸಿಬ್ಬಂದಿಯ ದಕ್ಷತೆ ಏನೇ ಇರಲಿ, ತಮಗೆ ಸಿಗುತ್ತಿರುವ ಸೇವೆಯ ಬಗೆಗೆ ಗ್ರಾಹಕರಿಗೆ ಪೂರ್ಣ ಸಮಾಧಾನ ಇಲ್ಲ ಎಂಬುದಂತೂ ನಿಜ.

ಸರಕಾರದ ಹೊಸ ಹೊಸ ಯೋಜನೆಗಳನ್ನು ಕಾರ್ಯಗತಗೊಳಿಸುವ ಪ್ರಯತ್ನದಲ್ಲಿ ಬ್ಯಾಂಕುಗಳು ಕಂಗಾಲಾಗಿವೆ. ಗ್ರಾಹಕ ವರ್ಗ ಅಗಾಧವಾಗಿ ಬೆಳೆದಿದೆ. ಸಾಮಾಜಿಕ ನ್ಯಾಯ ದೊರಕಿಸಲು ಬ್ಯಾಂಕುಗಳಿಂದ ಮಾತ್ರ ಸಾಧ್ಯ ಎಂಬ ನಂಬಿಕೆ ಸರಕಾರದಲ್ಲಿ ಮತ್ತು ತನ್ಮೂಲಕ ಸಾರ್ವಜನಿಕರಲ್ಲಿ ಬೇರೂರಿದಂತಿದೆ. ಈ ಹಿನ್ನೆಲೆಯಲ್ಲಿ ಬ್ಯಾಂಕುಗಳಿಗೆ ಸಾಲಕ್ಕಾಗಿ 'ಹಾಯುವ' ವ್ಯಕ್ತಿಗಳ ಸಂಖ್ಯೆ ಗಣನೀಯವಾಗಿ ಹೆಚ್ಚಿದೆ. ಸಾಲ ನೀಡಿಕೆಯ ಸಂದರ್ಭದಲ್ಲಿ ಮಧ್ಯವರ್ತಿಗಳು ಹಾಗೂ ಮೇಲಿನವರಿಂದ ಬರುವ ಒತ್ತಡ ಮತ್ತು ಕಾಲದ ನಿರ್ಬಂಧ ಇವುಗಳ ದೆಸೆಯಿಂದ ಬ್ಯಾಂಕುಗಳ ಗ್ರಾಹಕ ಸೇವಾ ಸಾಮರ್ಥ್ಯ ಕುಸಿದಿದೆ. ಪರಿಸ್ಥಿತಿ ಹೀಗಿರುವಾಗ ಗ್ರಾಹಕ ಸೇವೆಯ ಬಗೆಗೆ ಅತೃಪ್ತಿ ಮೂಡಿದ್ದರೆ ಅದು ಕೇವಲ ಸಹಜ.

### ಸಾಮಾಜಿಕ ಲಾಭ ಎಷ್ಟು?

ಸಾಮಾಜಿಕ ಬ್ಯಾಂಕಿಂಗಿನ ಫಲವಾಗಿ ಠೇವಣಿದಾರ ತನ್ನ ಹಣದ ಮೇಲೆ ಬ್ಯಾಂಕುಗಳಿಂದ ಎಷ್ಟು ಪ್ರತಿಫಲ ಪಡೆಯುತ್ತಿದ್ದಾನೆ ಎಂಬುದು ಒಂದು ಪ್ರಶ್ನೆಯಾದರೆ, ಸಮಾಜಕ್ಕೆ ಇದರ ಕಾಣಿಕೆ ಏನು ಎನ್ನುವುದು ಇನ್ನೊಂದು. ಮೊದಲೇ ಹೇಳಿದಂತೆ ಶಾಖೆಗಳ ಸಂಖ್ಯೆ ಹೆಚ್ಚಿದ್ದರಿಂದ ಬ್ಯಾಂಕಿಂಗ್ ಸೇವೆಗಳು ಎಲ್ಲ ವರ್ಗಗಳ ಎಲ್ಲ ರೀತಿಯ ಜನರಿಗೆ ದೊರೆಯುವಂತಾದುದು ಒಂದು ಮುಖ್ಯ ಸಾಮಾಜಿಕ ಲಾಭ ಎನ್ನಲಡ್ಡಿಯಿಲ್ಲ. ಸಾಲಕ್ಕಾಗಿ ಬರುವ ವ್ಯಕ್ತಿಯಿಂದ 'ಭದ್ರತೆ' ಅಪೇಕ್ಷಿಸುತ್ತಿದ್ದ ಬ್ಯಾಂಕರರ ದೃಷ್ಟಿ ಸಾಲಗಾರನ ಅಗತ್ಯವನ್ನು ಗಮನಿಸುವಂಥ ಪರಿವರ್ತನೆಯಾದುದೂ ಸರಿಯೇ. ಹಾಗೆಯೇ ಕೆಲವು ಮೇಲ್ವರ್ಗಗಳಿಗೆ ಸೀಮಿತಗೊಂಡ ಬ್ಯಾಂಕ್ ಉದರಿ ದುರ್ಬಲ ವರ್ಗಗಳಿಗೂ ಗ್ರಾಮೀಣ ಜನತೆಗೂ ಸಲ್ಲುತ್ತಿರುವುದು ನ್ಯಾಯವಾಗಿಯೇ ಇದೆ ಎನ್ನೋಣ.

ಮೇಲುನೋಟಕ್ಕೆ ಕಾಣುವ ಈ 'ಸಾಮಾಜಿಕ ಲಾಭ'ಗಳಲ್ಲದೆ ಬ್ಯಾಂಕುಗಳ ಇತರ ಸಾಧನೆಗಳೇನು? ಆದ್ಯತಾ ವಲಯಗಳಿಗೆ, ದುರ್ಬಲ ವರ್ಗಗಳಿಗೆ, ಗ್ರಾಮೀಣ ಜನತೆಗೆ ಸರಕಾರದ ವಿವಿಧ ಯೋಜನೆಗಳಡಿ ನೀಡಿದ ಮುಂಗಡಗಳು ನಿರೀಕ್ಷಿತ ಫಲ ಕೊಟ್ಟಿವೆಯೇ? ಎಂಬುದು ನಿಜವಾದ ಪ್ರಶ್ನೆ. (ಇಂಥ ಮುಂಗಡಗಳ ಮರುಪಾವತಿ ಎಷ್ಟೇ ಕಡಮೆಯಾದರೂ ಅದಕ್ಕೆ ಪ್ರತಿಯಾದ ಸಾಮಾಜಿಕ ಲಾಭ ಉಂಟಾಗಿದ್ದರೆ ಅದನ್ನು ಗ್ರಾಹಕನಿಗೆ ಸಂದ ಅಪರೋಕ್ಷ ಲಾಭ ಎಂದೇ ಪರಿಗಣಿಸೋಣ.) ಗ್ರಾಮೀಣ ಉದರಿ ವಸೂಲಿಯ ಪ್ರಮಾಣ ಸುಮಾರು ಶೇ. 20 ಎನ್ನಲಾಗಿದೆ. ಕೃಷಿಕನಿಗೆ ಸಾಲ ತೀರಿಸುವ ಸಾಮರ್ಥ್ಯವನ್ನು ತಂದುಕೊಡದಿದ್ದರೆ ಹೋಗಲಿ, ಉತ್ಪಾದನೆಯ ಮಟ್ಟ ಹೆಚ್ಚಿಸಿ ಆತನ ಜೀವನ ಮಟ್ಟವನ್ನು ಸುಧಾರಿಸಿದೆಯೇ?

ಹಾಗೆಯೇ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ, ಭಿನ್ನಕ ಬಡ್ಡಿದರ ಯೋಜನೆ, ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ಸ್ವಯಂ ಉದ್ಯೋಗ ಯೋಜನೆ, 20 ಅಂಶಗಳ ಆರ್ಥಿಕ ಕಾರ್ಯಕ್ರಮ, ನವೋನ್ಮೇಷ ಬ್ಯಾಂಕಿಂಗ್ ಇವೇ ಮುಂತಾದ ಹೆಸರಿನಲ್ಲಿ ನೀಡಲಾದ ಸಾಲಗಳ ಪರಿಣಾಮ ಏನಾಗಿದೆ?

ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಬಹುದೂರ ಹೋಗಬೇಕಾಗಿಲ್ಲ. ಬ್ಯಾಂಕುಗಳು ಮಾಡಿರುವ ಸರ್ವೇಕ್ಷಣಗಳಿಂದ ತಿಳಿದುಬಂದಿರುವ ಅಂಶಗಳು ಸಾಕಷ್ಟು ನಿರುತ್ತೇಜಕವಾಗಿಯೇ ಇವೆ. ಸರಕಾರದ ಯೋಜನೆಗಳು ಸಫಲವಾಗದಿರಲು ಸರ್ವೇಕ್ಷಣಗಳು ನೀಡುವ ಕಾರಣಗಳು ಕೇವಲ ಮೇಲಿನವರ ಅಸಮಾಧಾನಕ್ಕೆ ಗುರಿಯಾಗದಿರಲು ಸೂಚಿಸಿದವಾಗಿರಬಹುದು. ಆದ್ದರಿಂದ ಸರ್ವೇಕ್ಷಣಗಳು ವರದಿ ಮಾಡಿರುವುದಕ್ಕಿಂತ ಪರಿಸ್ಥಿತಿ ಗಂಭೀರವಾಗಿಯೇ ಇದೆಯೆಂದು ಊಹಿಸಲು ಸಾಧ್ಯ.

ಸರಕಾರ ಹಾಕಿಕೊಂಡ (ಅಥವಾ ಬ್ಯಾಂಕುಗಳಿಗೆ ಹಾಕಿಕೊಟ್ಟ?) ಬಡತನ ನಿರ್ಮೂಲನ ಕಾರ್ಯಕ್ರಮಗಳಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮವೇ ಅತ್ಯಂತ ಪರಿಣಾಮಕಾರಿ ಶಕ್ತವಾದುದೆಂದು ನಂಬಲಾಗಿದೆ. ಈ ಯೋಜನೆಯಡಿ ನೀಡಲಾದ ಬ್ಯಾಂಕ್ ಸಾಲಗಳೇ ಅಷ್ಟೇನೂ ಯಶಸ್ವಿಯಾಗಿಲ್ಲ ಎಂದು ತಿಳಿದು ಬಂದಿದೆ. ಎಂದಮೇಲೆ ಈ ವಿಚಾರದಲ್ಲಿ ಹೆಚ್ಚು ಹೇಳಬೇಕಾದುದೇನು?

ಸಾಮಾಜಿಕ ಬ್ಯಾಂಕಿಂಗಿನ ಹೆಸರಿನಲ್ಲಿ ಬ್ಯಾಂಕುಗಳು ನೀಡಿದ ಸಾಲಗಳಿಂದ ಉಂಟಾದ ಸಾಮಾಜಿಕ ಲಾಭ ಶೂನ್ಯಕ್ಕೆ ಹತ್ತಿರದ ಸಂಖ್ಯೆ ಎಂದು ನಂಬಬಹುದು. ಸಾಮಾಜಿಕನೂ ಆದ ಗ್ರಾಹಕನಿಗೆ ಈ ದಿಶೆಯಲ್ಲೂ ಲಾಭವಿಲ್ಲ.

### ಬ್ಯಾಂಕುಗಳ ಲಾಭ ಮತ್ತು ಸಾಲಗಳ ಗುಣಮಟ್ಟ

ಇಷ್ಟೆಲ್ಲ ಆದರೂ ಬ್ಯಾಂಕುಗಳು ಲಾಭ ತೋರಿಸುತ್ತಿವೆಯೆಂಬ ಸಂಗತಿ ಹಲವರಿಗೆ ಆಶ್ಚರ್ಯ ಉಂಟುಮಾಡಬಹುದು. ಪರಿಸ್ಥಿತಿ ದಿನೇದಿನೇ ಗಂಭೀರವಾಗುತ್ತಿದೆ ಎಂಬುದು ಬ್ಯಾಂಕರರಿಗೆ ಮನದಟ್ಟಾಗುತ್ತಿದೆ.

ಕರಡು ಋಣಗಳಿಗೆ ಸರಿಯಾದ ಏರ್ಪಾಟಾಗಿದೆಯೇ ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ಬರಲಾರದು. ಯಾವುದು ಕರಡು ಋಣ ಎಂದು ತೀರ್ಮಾನಿಸುವುದು ಬ್ಯಾಂಕೇ ತಾನೇ ? ಒಳ್ಳೆಯ ಸಾಲಗಳೆಂದು ತೋರಿಸಲಾದವು ವಾಸ್ತವವಾಗಿ ಹಾಗಲ್ಲದೆಯೂ ಇರಬಹುದು.

ಕೃಷಿ ಸಾಲಗಳಲ್ಲಿ ಮರುಪಾವತಿ ತೋರಿಸುವ ಉದ್ದೇಶದಿಂದ ಸಾಲಗಳನ್ನು ನವೀಕರಿಸಿ/ಹೆಚ್ಚಿಸಿ ಮರುಪಾವತಿಯಾದಂತೆ ತೋರಿಸಲಾಗುತ್ತಿದೆ ಎನ್ನಲಾಗಿದೆ. ಉದ್ಯಮ/ಕೈಗಾರಿಕಾ ಸಾಲಗಳನ್ನು ವರ್ಷಕ್ಕೊಮ್ಮೆ ಪರಾಮರ್ಶಿಸಬೇಕೆಂಬ ನಿಯಮವಿದ್ದರೂ ವಾಸ್ತವವಾಗಿ ಕಾರಣಾಂತರಗಳಿಂದ ಅನೇಕ ಸಂದರ್ಭಗಳಲ್ಲಿ ಮೂರು ನಾಲ್ಕು ವರ್ಷಗಳೇ ಸಂದರೂ ಪರಾಮರ್ಶೆ ನಡೆದಿರುವುದಿಲ್ಲ. ಸರಿಯಾದ ಪರಿಶೀಲನೆ ನಡೆದುದೇ ಆದಲ್ಲಿ 'ಕರಡು ಋಣ'ಗಳ ಪಟ್ಟಿಗೆ ಸೇರಬೇಕಾದ ಸಾಲಗಳ ಸಂಖ್ಯೆ ಸಾಕಷ್ಟು ಏರಬಹುದು. ಜಮಖಾನೆಯಡಿ ಕಸ ತಳ್ಳುವಂತೆ. ಸರಿಯಾದ ಕ್ರಮಗಳನ್ನು ಕೈಗೊಳ್ಳದೆ ಇರುವ ಸ್ಥಿತಿಯಲ್ಲೇ ಮುಂದುವರಿಯುತ್ತಿದ್ದರೆ ಪರಿಣಾಮ ಇನ್ನೂ ಘೋರವಾಗುವುದರಲ್ಲಿ ಸಂಶಯವಿಲ್ಲ.

ಕರಡು ಋಣಗಳಿಗೆ ಉದರಿ ವಿಮೆಗೆ ಠೇವಣಿ ವಿಮಾ ಹಾಗೂ ಉದರಿ ಖಾತರಿ ನಿಗಮದಿಂದ ನಷ್ಟ ತುಂಬಿಬರುವುದಾದರೂ ಅದು ಗರಿಷ್ಠ ಶೇ. 75 ಭಾಗ, ಉಳಿದ ಶೇ. 25 ನಷ್ಟವಾಗುವುದಿಲ್ಲವೇ ? ಉದರಿ ವಿಮೆ ಇಲ್ಲದ (ಉದಾ : ದೊಡ್ಡ ಕೈಗಾರಿಕೆಗೆ ನೀಡಿದ ಸಾಲಗಳು ಇತ್ಯಾದಿ) ಸಾಲಗಳು ಕೆಟ್ಟರಂತೂ ಪೂರ್ತಿ ನಷ್ಟವೇ.

### ಠೇವಣಿದಾರರು ಎಚ್ಚರಗೊಂಡರೆ

ಹಾಗಾದರೆ ಠೇವಣಿದಾರರು ತಮ್ಮ ಠೇವಣಿಗಳ ಭದ್ರತೆ ಕುರಿತು ಚಿಂತಿಸಬೇಕಾದ ಸ್ಥಿತಿ ಇದೆಯೆ ? ಬ್ಯಾಂಕುಗಳು ಸರಕಾರಿ ಸ್ವಾಮ್ಯಕ್ಕೊಳಪಟ್ಟಿರುವುದರಿಂದ ತಾವು ಠೇವಣಿ ಮಾಡಿದ ಹಣವೂ ಸುರಕ್ಷಿತವಾಗಿರುವುದೆಂದು ಭಾವಿಸಬಹುದೆ ? ಠೇವಣಿಗಳನ್ನು ಸರಿಯಾಗಿ ವಿನಿಯೋಜಿಸದಿದ್ದರೆ ಠೇವಣಿದಾರರಿಗೆ ಸಲ್ಲುವ ಪ್ರತಿಫಲ (ದೀರ್ಘಕಾಲಿಕ ದೃಷ್ಟಿಯಿಂದ) ಕಡಮೆಯಾಗುವುದು ಅನಿವಾರ್ಯವಾದ್ದರಿಂದ ಗ್ರಾಹಕರ ದೃಷ್ಟಿ ಬೇರೆಡೆ ತಿರುಗುವ ಸಾಧ್ಯತೆ ಇದ್ದೇ ಇದೆ.

ಇತ್ತೀಚೆಗೆ ಏಕಸ್ವಾಮ್ಯ ನಿರ್ಬಂಧಕ ವ್ಯಾಪಾರಾಭ್ಯಾಸಗಳ ಅಧಿನಿಯಮ ಮತ್ತು ವಿದೇಶಿ ವಿನಿಮಯ ವಿನಿಯಮನ ಅಧಿನಿಯಮ ಇವುಗಳಿಗೆ ಹೊರತಾದ (Non-MRTP and non-FERA) ಕಂಪನಿಗಳ ಡಿಬೆಂಚರುಗಳ ಮೇಲೆ ನೀಡಬಹುದಾದ ಗರಿಷ್ಠ ಬಡ್ಡಿ ಶೇ. 13½ಯಿಂದ ಶೇ. 15ಕ್ಕೆ ಏರಿದೆ. ಇದರಿಂದ ಕಂಪನಿ ಠೇವಣಿಗಳು ಬ್ಯಾಂಕ್ ಠೇವಣಿಗಳಿಗಿಂತ ಹೆಚ್ಚು ಆಕರ್ಷಕವಾಗಿವೆ. ಆಕರ್ಷಕ ಬಡ್ಡಿಯೊಂದಿಗೆ ವಿಶೇಷ ತೆರಿಗೆ ರಿಯಾಯತಿಗಳನ್ನೂ ನೀಡುವ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳೇ ಮುಂತಾದ ವಿನಿಯೋಜನೆಗಳಿರುವಾಗ ಬ್ಯಾಂಕ್ ಠೇವಣಿಗಳು ಕ್ರಮೇಣ ಕರಗುವ ಚಿತ್ರವನ್ನು ವಿವೇಕಿಗಳಾದ ಬ್ಯಾಂಕರರು ತಮ್ಮ ಕಣ್ಮುಂದೆ ತಂದುಕೊಳ್ಳಲು ಇದು ಸಕಾಲವೆನ್ನಿಸುತ್ತದೆ. ಬ್ಯಾಂಕುಗಳ ಠೇವಣಿಗಳು ಇನ್ನೂ ಏರುಮುಖವಾಗಿಯೇ ಇದ್ದರೆ ಅದು ಠೇವಣಿದಾರರ ಜಾಗೃತಿಯ ಕೊರತೆಯಿಂದ ಎಂದು ವಾದಿಸಬಹುದೆಂದು ತೋರುತ್ತದೆ. ವಿನಿಯೋಜನೆಯ ವಿವಿಧ ರೂಪಗಳನ್ನು ಕುರಿತಂತೆ ಠೇವಣಿದಾರರ ಅರಿವು ತೀರ ಕಡಿಮೆ ಎಂದು ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆಸಿದ ಒಂದು ಸಮೀಕ್ಷೆ ಅಭಿಪ್ರಾಯಪಟ್ಟಿದೆ. ಬ್ಯಾಂಕುಗಳ ಉದರಿ ನೀತಿ, ಉದರಿ ಉಸ್ತುವಾರಿ ವ್ಯವಸ್ಥೆ, ವಸೂಲಾತಿ ಇವು ಇನ್ನೂ ಉತ್ತಮಗೊಳ್ಳದಿದ್ದಲ್ಲಿ ಠೇವಣಿಗಳು ನಷ್ಟವಾಗಿ ಬ್ಯಾಂಕುಗಳ ಜೀವನ ಸಾಮರ್ಥ್ಯಕ್ಕೇ ತೀವ್ರ ಧಕ್ಕೆಯುಂಟಾಗುವುದು ಖಂಡಿತ.

### ಸಾಲಮೇಳ

ಇತ್ತೀಚೆಗೆ ಸಾರ್ವಜನಿಕ ಚರ್ಚೆಗಳಿಗೆ ವಸ್ತುವಾಗಿರುವ ಬ್ಯಾಂಕಿಂಗ್ ವಿಷಯವೆಂದರೆ ಸಾಲಮೇಳಗಳು. ಬ್ಯಾಂಕ್ ಶಾಖೆಗಳು ನಿರ್ದಿಷ್ಟ ಅವಧಿಯೊಳಗೆ ನಿರ್ದಿಷ್ಟ ಸಂಖ್ಯೆಯ ಹಿಂದುಳಿದ/ದುರ್ಬಲ ವ್ಯಕ್ತಿಗಳಿಗೆ ಸಾಲ ನೀಡಬೇಕೆಂದು ಒತ್ತಡ ಹೇರಿ ಸಾರ್ವಜನಿಕ ಸಮಾರಂಭಗಳಲ್ಲಿ ಸಾಲ ಮಂಜೂರಾತಿ ಪತ್ರಗಳನ್ನು ವಿತರಿಸುವುದನ್ನು ನಮ್ಮ ಮುಖಂಡರ ಸಾಮಾಜಿಕ ಬ್ಯಾಂಕಿಂಗ್ ಪರಿಕಲ್ಪನೆಯ ಪರಾಕಾಷ್ಠೆ ಎನ್ನಬಹುದು.

ಬಡತನ ನಿವಾರಣೆಗೆ ಅಗತ್ಯವಾದ ಅಂಶ ಯಾವುದು ? ಬಡತನ ನಿರ್ಮೂಲ ಮಾಡಲು ಅಗತ್ಯವಾದ ಸಂಸ್ಥೆ ಯಾವುದು ? ಈ ಎರಡೂ ಪ್ರಶ್ನೆಗಳಿಗೂ ನಮ್ಮ ಯೋಜಕರದು—ಒಂದೊಂದೇ ಪದದ ಉತ್ತರ—ಹಣ, ಹಾಗೂ ಬ್ಯಾಂಕು. ಹಣವಿದ್ದ ಮಾತ್ರಕ್ಕೆ ಅದನ್ನು ಲಾಭಪ್ರದವಾಗಿ ಬಳಸುವ ಸಾಮರ್ಥ್ಯ ಎಲ್ಲರಲ್ಲಿಯೂ ಇರುತ್ತದೆಯೇ ? ಬಂಡವಾಳ ಉಪಯೋಗಿಸಿ ಉದ್ಯಮವೊಂದನ್ನು ನಡೆಸುವುದು ಒಂದು ಕೌಶಲ. ಆದರಲ್ಲೂ ಬೇರೆ ಬೇರೆ ಉದ್ಯಮಕ್ಕೆ ಬೇರೆ ಬೇರೆ ರೀತಿಯ ಕೌಶಲ ಅಗತ್ಯವಾಗುತ್ತದೆ. ಉದ್ಯಮ ನಡೆಸಲು ಹಣದ ಸಮಸ್ಯೆಯಲ್ಲದೆ ಕಚ್ಚಾಸಾಮಗ್ರಿಯ ದಾಸ್ತಾನು ಪೂರೈಕೆ, ಉತ್ಪಾದನೆ ಉಸ್ತುವಾರಿ, ಗುಣಮಟ್ಟ ನಿಯಂತ್ರಣ, ಮಾರಾಟ, ವಸೂಲಿ ಮುಂತಾದುವಕ್ಕೆ ಸಂಬಂಧಿಸಿದ ವಿವಿಧ ಸಮಸ್ಯೆಗಳು ಇರುವುದಿಲ್ಲವೇ ?

ಇವೆಲ್ಲವನ್ನೂ ಚಿಂತಿಸಿ ಮತ್ತಷ್ಟು ಸಮರ್ಪಕವಾದ ಉದರಿ ಯೋಜನೆಗಳನ್ನು ರೂಪಿಸಬೇಕಾಗಿರುವ ನೀತಿನಿರ್ಮಾಪಕರು ಮತ್ತು ಬ್ಯಾಂಕ್ ವರಿಷ್ಠರು ಸಾಲಮೇಳದ ನಾಟಕಗಳಲ್ಲಿ ಪಾತ್ರವಹಿಸುತ್ತಿರುವುದು ಒಳ್ಳೆಯದರ ಸೂಚನೆಯೇನಲ್ಲ.

ಇತ್ತೀಚೆಗೆ ಪಾರ್ಲಿಮೆಂಟರಿ ಸಮಿತಿಯು ಸಾಲಮೇಳಗಳಲ್ಲಿ ಸಾಲ ವಿತರಿಸುವುದರ ಬಗೆಗೆ ಆಕ್ಷೇಪ ಎತ್ತಿದ್ದು, ತತ್ಫಲವಾಗಿ ಸರಕಾರಿ ವಲಯದ ಬ್ಯಾಂಕುಗಳ ಅಧ್ಯಕ್ಷರ ಸಭೆಯಲ್ಲಿ ಈ ಮುಂದಿನಂತೆ ತೀರ್ಮಾನಿಸಿರುವುದಾಗಿ ತಿಳಿದು ಬಂದಿದೆ : ಪ್ರತಿ ಶಾಖೆಯೂ ಪ್ರತಿ ತಿಂಗಳೂ ದುರ್ಬಲವರ್ಗಗಳಿಗೆ ಕನಿಷ್ಠ 25 ಸಾಲಗಳನ್ನು ಮಂಜೂರು ಮಾಡಿ ವಿತರಿಸಬೇಕು. ಸಾಲ ನೀಡುವ ಬ್ಯಾಂಕು ಸಾರ್ವಜನಿಕ ಸಭೆ ಕರೆದು ಸಾಲಗಳ ಮಂಜೂರಾತಿಯ ಬಗೆಗೆ ತಿಳಿಸಬೇಕು. ಸಾಲ ನೀಡಿಕೆಯಲ್ಲಿ ಪಕ್ಷಪಾತ ಅಥವಾ ಅವ್ಯವಹಾರಗಳನ್ನು ತಡೆಯಲು ಇಂಥ ಸಭೆಗಳು ಅಗತ್ಯವೆಂದು ಹೇಳಲಾಗಿದೆ. ಈ ನಿರ್ಧಾರ ಜಾರಿಗೆ ಬಂದರೆ ಸಾಲಮೇಳಗಳ ನಾಟಕಕ್ಕೆ ತೆರೆ ಎಳೆದಂತಾಗುವುದೋ ಅಥವಾ ಈ ವ್ಯವಸ್ಥೆ ಅದೇ ನಾಟಕದ ಇನ್ನೊಂದು ಅಂಕವಾಗುವುದೋ ಕಾದು ನೋಡಬೇಕಾಗಿದೆ.

**ಸಲಹೆಗಳು**

1 ಸಾಮಾಜಿಕ ಅಭಿವೃದ್ಧಿಯಲ್ಲಿ ಬ್ಯಾಂಕುಗಳದೊಂದೇ ಪಾತ್ರವಲ್ಲ. ಇತರ ಅಭಿಕರಣಗಳೂ ಜತೆಗೂಡಬೇಕು. ದುರ್ಬಲ ವರ್ಗಗಳಿಗೆ ಸಾಲ ನೀಡುವಾಗ, ಜಿಲ್ಲಾ ಕೈಗಾರಿಕಾ ಕೇಂದ್ರ, ವಿಭಾಗ ಅಭಿವೃದ್ಧಿ ಕಛೇರಿ ಮುಂತಾದವು ಬ್ಯಾಂಕುಗಳೊಂದಿಗೆ ಕೂಲಂಕಷವಾಗಿ ವಿಚಾರವಿನಿಮಯ ಮಾಡಿ ಆಯಾ ವಿಭಾಗಗಳಲ್ಲಿ ನಡೆಸಿದ ಸರ್ವೇಕ್ಷಣಗಳ ಆಧಾರದ ಮೇಲೆ ಉದರಿ ಯೋಜನೆಗಳನ್ನು ರೂಪಿಸಿಕೊಂಡು, ಮಧ್ಯವರ್ತಿಗಳ ಪ್ರವೇಶವೂ ರಾಜಕೀಯ ಒತ್ತಡವೂ ಇಲ್ಲದಂತೆ ಬಂದ ಅರ್ಜಿಗಳನ್ನು ಪರಿಶೀಲಿಸಿ ಆಯ್ದ ವ್ಯಕ್ತಿಗಳಿಗೆ ಬ್ಯಾಂಕುಗಳು ಸಾಲ ನೀಡುವ ಪದ್ಧತಿ ಜಾರಿಗೆ ಬಂದಿರುವ ವಿಭಾಗಗಳಲ್ಲಿಪರಿಸ್ಥಿತಿ ಸ್ವಲ್ಪಉತ್ತಮವಾಗಿದೆ ಎಂದು ತಿಳಿದುಬಂದಿದೆ. ಆದ್ದರಿಂದ ಇಂಥ ಸಮಾಲೋಚನೆಗಳನ್ನು ಮಾಡುವುದು ಒಳ್ಳೆಯದು.

2 ಕ್ಷೇತ್ರ ಸಿಬ್ಬಂದಿ: ಉದರಿ ಉಸ್ತುವಾರಿಗೆ ಬ್ಯಾಂಕುಗಳು ತಕ್ಕಷ್ಟು ಕ್ಷೇತ್ರ ಸಿಬ್ಬಂದಿ ಇಲ್ಲವೆಂಬುದು ವಾಸ್ತವ ಸಂಗತಿ. ಭಾರತೀಯ ಬ್ಯಾಂಕರರ ಸಂಘದ ಇತ್ತೀಚಿನ ಸರ್ವಸದಸ್ಯರ ಸಭೆಯ ಅಧ್ಯಕ್ಷ ಭಾಷಣದಲ್ಲಿ ಬ್ಯಾಂಕುಗಳ ಕ್ಷೇತ್ರ ಸಿಬ್ಬಂದಿಯನ್ನು ಹೆಚ್ಚಿಸಬೇಕಾದ ತೀವ್ರ ಅಗತ್ಯವನ್ನು ಕುರಿತು ಶ್ರೀ ಎಂ. ಎನ್. ಗೋಯ್‌ಪಾರಾ ಅವರು ಪ್ರಸ್ತಾಪಿಸಿದ್ದಾರೆ. ಬ್ಯಾಂಕುಗಳಲ್ಲಿ ನಿತ್ಯ ನಡೆಯುವ ಲಕ್ಷಾಂತರ ವಹಿವಾಟುಗಳ ಲೆಕ್ಕ ತಾಳೆ ಮಾಡುವುದರಲ್ಲೇ ಸಿಬ್ಬಂದಿಯ ಬಹುಭಾಗ ನಿರತವಾಗಿದೆ. ಯಾಂತ್ರೀಕರಣವನ್ನು ವ್ಯಾಪಕಗೊಳಿಸುವುದರ ಮೂಲಕ ಹೆಚ್ಚು ಸಿಬ್ಬಂದಿಯನ್ನು ಉದರಿ ಉಸ್ತುವಾರಿಗೆ ಬಳಸಿಕೊಳ್ಳಬಹುದು.

3 ಸಾಲಗಾರರಿಗೆ ಸಾಲ ಸಿಕ್ಕಿದರೆ ಎಲ್ಲ ಮುಗಿದಂತಲ್ಲ. ಆ ಸಾಲದಿಂದ ಅವರಿಗೆ ನಿಜವಾಗಿ ಅನುಕೂಲವುಂಟಾಗುವ ಪರಿಸ್ಥಿತಿ ನಿರ್ಮಾಣವಾಗಬೇಕು. ಇಲ್ಲದಿದ್ದರೆ ಸಾಲ ಪಡೆದಾತನಿಗೆ ಉಂಟಾಗುವುದು ಕೇವಲ ತಾತ್ಕಾಲಿಕ ಲಾಭ ಮಾತ್ರ. ಕೊನೆಗೆ ಸಾಲ, ಬಡ್ಡಿ ಹೊರೆಯಿಂದ ತೊಂದರೆಯೇ ಹೆಚ್ಚು. ಹೀಗೆ ಗ್ರಾಹಕರಿಗೆ ನಿಜವಾದ ಅರ್ಥದಲ್ಲಿ ಲಾಭ ದೊರೆಯಬೇಕಾದರೆ ಬ್ಯಾಂಕರರು ಸುದಭ್ರವಾದ ಉದರಿ ನೀತಿಯನ್ನು ಅನುಷ್ಠಾನಕ್ಕೆ ತರಬೇಕು.

4 ಸಾಮಾಜಿಕ ಬ್ಯಾಂಕಿಂಗ್‌ನಲ್ಲಿ ಸಾಲಗಳ ಗಾತ್ರ ಅನಿವಾರ್ಯವಾಗಿ ಸಣ್ಣದಾಗಿರುವುದಾದರೂ ಸಾಲಗಾರರ ಸಂಖ್ಯೆ ಹೆಚ್ಚು. ಆದ್ದರಿಂದ ಉಸ್ತುವಾರಿಯ ಜವಾಬ್ದಾರಿಯೂ ಹೆಚ್ಚು; ಮತ್ತುನಷ್ಟ ಸಂಭಾವ್ಯತೆಯೂ ಹೆಚ್ಚು. ಆದುದರಿಂದ ಇಲ್ಲಿ ಆತುರದ ಕ್ರಮಗಳಿಗೆ, ದೂರದೃಷ್ಟಿರಹಿತ ಯೋಜನೆಗಳಿಗೆ ಸ್ಥಾನ ಇರಕೂಡದು.

5 ಬ್ಯಾಂಕ್ ವ್ಯವಸ್ಥಾಪನದಲ್ಲಿ ಸರ್ಕಾರದ ಹಸ್ತಕ್ಷೇಪ ಕುರಿತು ಒಂದು ಮಾತು. ಬ್ಯಾಂಕುಗಳು ಹೆಚ್ಚಿನ ಸ್ವಾತಂತ್ರ್ಯ ವಹಿಸಿ ಕೆಲಸ ಮಾಡಲು ತಕ್ಕ ವಾತಾವರಣ ಮತ್ತೆ ಉಂಟಾಗಬೇಕಾಗಿದೆ. ಬ್ಯಾಂಕ್ ವರಿಷ್ಠರು ಸರ್ಕಾರದ ಎಲ್ಲ ಯೋಜನೆಗಳ ತಾಳಕ್ಕೆ ತರ್ಕರಹಿತವಾಗಿ ಸ್ಪಂದಿಸುವುದನ್ನು ನಿಲ್ಲಿಸಿ ಅನುಭವಪ್ರೇರಿತವಾದ ತಮ್ಮ ಸ್ಪಷ್ಟ ಅಭಿಪ್ರಾಯಗಳನ್ನುಸರ್ಕಾರದ ಮುಂದಿಡುವುದನ್ನು ರೂಢಿಸಿಕೊಳ್ಳಬೇಕು.

6 ದುರ್ಬಲ ವರ್ಗಗಳಿಗೆ/ಗ್ರಾಮೀಣ ಜನತೆಗೆ ನೀಡುವ ಉದರಿಯನ್ನು ಕುರಿತು ತಾತ್ಸಾರ ತೋರುವ ಸಿಬ್ಬಂದಿ ಇರಬಹುದು. 'ಬ್ಯಾಂಕ್‌ಅಧಿಕಾರಿಗಳು ದುರ್ಬಲ ವರ್ಗಗಳಿಗೆ ಸಾಲ ನೀಡಲು ಅನೇಕ ಅಧಿಕಾರಿಗಳು ಸಿದ್ಧರಿಲ್ಲ' ಎಂಬ ಆರೋಪ ಹೇರಲಾಗಿದೆ. ಈ ಹಿನ್ನೆಲೆಯಲ್ಲಿ ಅಗತ್ಯವೆನಿಸಿದೆಡೆಗಳಲ್ಲಿ ಯುಕ್ತ ತಿಳುವಳಿಕೆ ತರಬೇತಿ ನೀಡಿ ಸಿಬ್ಬಂದಿಯ ಮನೋಭಾವವನ್ನು ರೂಪಿಸುವ ಪ್ರಯತ್ನ ಮಾಡಬಹುದು.

**ಸಾಂಪ್ರದಾಯಿಕ ಬ್ಯಾಂಕಿಂಗಿನ ಭವಿಷ್ಯ**

ಠೇವಣಿದಾರರೇ ಬ್ಯಾಂಕುಗಳ ಜೀವಾಳ ಎಂಬುದು ನಿಜವಾದರೂ ಸದ್ಯದ ಸಾಮಾಜಿಕ ಪರಿಸ್ಥಿತಿಯಲ್ಲಿ ಠೇವಣಿದಾರರ ಲಾಭವೊಂದನ್ನೇ ಗಮನದಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲ. ಸಾಲಗಾರರು ಠೇವಣಿದಾರರಲ್ಲದಿದ್ದರೂ ಗ್ರಾಹಕರೇ. ಅವರಿಗಾದರೂ ನಿಜವಾದ ಲಾಭವುಂಟಾಗುವಂತಾಗಲಿ. ಬಡತನ ಹಾಗೂ ನಿರುದ್ಯೋಗದ ಸಮಸ್ಯೆಗಳು ತೀವ್ರವಾಗಿರುವಾಗ ಸರ್ಕಾರ ಅದರ ನಿವಾರಣೆಗೆ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಲೇಬೇಕಾಗುತ್ತದೆ. ನಮ್ಮ ಬ್ಯಾಂಕುಗಳ ಹರಹು, ಅವುಗಳ ಸಿಬ್ಬಂದಿಯ ಪ್ರಾಮಾಣಿಕತೆ, ದಕ್ಷತೆ, ಸಾಮರ್ಥ್ಯಗಳನ್ನೂ ಮತ್ತು ಮುಖ್ಯವಾಗಿ ಬ್ಯಾಂಕುಗಳಲ್ಲಿ ಲಭ್ಯವಿರುವ ಉದರಿಯನ್ನೂ ಸಾಮಾಜಿಕ ಲಾಭಕ್ಕಾಗಿ ಬಳಸಲು ಸರ್ಕಾರ ಬಯಸಿದರೆ ತಪ್ಪಲ್ಲ. ಆದರೆ, ಯೋಜನೆಗಳು ಯಶಸ್ವಿಯಾಗಬೇಕಾದರೆ ಅವು ವಾಸ್ತವ ದೃಷ್ಟಿಯಿಂದಲೂ ದೂರದೃಷ್ಟಿಯಿಂದಲೂ ರೂಪಿತವಾಗಬೇಕು. ಯಾವುದೇ ಸಾಮಾಜಿಕ ಲಾಭವನ್ನೂ ಉಂಟುಮಾಡದೆ ಬ್ಯಾಂಕುಗಳ ಲಾಭಪ್ರದತೆಯನ್ನು ತೀವ್ರವಾಗಿ ಮೊಟಕುಗೊಳಿಸುವ ನಿರರ್ಥಕ ಯೋಜನೆಗಳಿಗೆ ಬ್ಯಾಂಕುಗಳು ಸ್ಥಾನ ಕೊಡಬಾರದು.

'ಬ್ಯಾಂಕಿಂಗಿನ ಆಯಾಮಗಳೇ ಬದಲಾಗಿವೆ' ಎಂಬ ಒಣ ಧೋರಣೆಯಿಂದಲೋ, ಕರಡು ಋಣಗಳಿಗೆ ಉದರಿ ವಿಮೆ ಲಭ್ಯವಿದೆ, ಅಥವಾ ಅದರಿಂದ ನಷ್ಟವಾದರೂ ಬಡ್ಡಿಯಲ್ಲದೆ ಇತರ ಮೂಲಗಳಿಂದ ಲಾಭ ಹೆಚ್ಚಿಸಿಕೊಳ್ಳಬಹುದು ಎಂದೋ ವಾದಿಸಿ ಈಗಿನ ಸ್ಥಿತಿಯನ್ನೇ ಮುಂದುವರಿಸಿದರೆ ಇಡೀ ಬ್ಯಾಂಕಿಂಗ್ ವ್ಯವಸ್ಥೆಯೇ ಕುಸಿಯುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಸಾಮಾಜಿಕ ಬದಲಾವಣೆಯ ಪ್ರವರ್ತಕರೆನಿಸಿ, ಲಕ್ಷಾಂತರ ಮಂದಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಟ್ಟಿರುವ ಬ್ಯಾಂಕಿಂಗ್ ವ್ಯವಸ್ಥೆಗೆ ಅಂಥ ಸ್ಥಿತಿ ಬಾರದಿರಲಿ.

ಸಾಮಾಜಿಕ ಬ್ಯಾಂಕಿಂಗಿನ ಗುರಿ ಸಾಮಾಜಿಕ ಅಭಿವೃದ್ಧಿ. ತಾವು ನೀಡುವ ಉದರಿಯಿಂದ ನಿಜವಾದ ಸಾಮಾಜಿಕ ಅಭಿವೃದ್ಧಿ/ಸಾಮಾಜಿಕ ಲಾಭ ಉಂಟಾಗುವಂತೆ ತಮ್ಮ ಉದರಿ ನೀತಿಯನ್ನು ರೂಪಿಸುವುದು ಬ್ಯಾಂಕುಗಳ ಸಾಮಾಜಿಕ ಹೊಣೆ. ಬ್ಯಾಂಕುಗಳ ಆರ್ಥಿಕ ಜೀವಂತಿಕೆ ಪಣವಾಗಿರುವ ಈ ಸಮಯದಲ್ಲಿ ಬ್ಯಾಂಕರರು ಈ ಹೊಣೆಯನ್ನು ಸಮರ್ಥವಾಗಿ ನಿರ್ವಹಿಸದಿದ್ದರೆ ಅದು ಗ್ರಾಹಕರಿಗೆ, ಸಮಾಜಕ್ಕೆ ಎಸಗುವ ಅಪಚಾರ.



# ಗ್ರಾಮೀಣ ಪ್ರದೇಶದಲ್ಲಿ ವಾಣಿಜ್ಯ ಬ್ಯಾಂಕುಗಳು

ಎಂ. ಶಶಿಧರ

ಭಾರತದ ಗ್ರಾಮೀಣ ಪ್ರದೇಶ ಸಾಮಾನ್ಯವಾಗಿ ಹಿಂದುಳಿದ ಪ್ರದೇಶ. ಆಳುವವರ ಕೇಂದ್ರೀಕರಣ ನೀತಿಯಿಂದಾಗಿ ಉದ್ಯಮಗಳೆಲ್ಲ ನಗರದ ಸುತ್ತ ನಾಯಿಕೊಡೆಗಳಂತೆ ಹುಟ್ಟಿಕೊಂಡು, ಹಳ್ಳಿಯ ಸಂಪತ್ತೆಲ್ಲ ಅಲ್ಲಿ ವಿನಿಯೋಗವಾಗುತ್ತಿರುವುದರಿಂದ ಜನರು ನಗರಗಳಿಗೆ ವಲಸೆ ಹೋಗುವುದು ಸಾಮಾನ್ಯ ದೃಶ್ಯವಾಗುತ್ತಿದೆ. ವಲಸೆಗೆ ಕಾರಣಗಳೆಂದರೆ—ಹಳ್ಳಿಯ ಬಳಿ ಕೆಲಸಕ್ಕೆ ಅವಕಾಶವಿಲ್ಲ; ಹೊಸದಾಗಿ ವ್ಯವಹಾರವನ್ನು ಆರಂಭಿಸುವುದಾದರೆ ಅವಕಾಶ ಕಡಿಮೆ; ವಿದ್ಯಾಭ್ಯಾಸಕ್ಕೆ ಅವಕಾಶ ಕಡಿಮೆ, ಇತ್ಯಾದಿ. ಹಳ್ಳಿಗಳ ಆರ್ಥಿಕ ರಚನೆಯೇ ದುರ್ಬಲವಾಗಿದ್ದು, ಅಭಿವೃದ್ಧಿಗೊಳ್ಳಲು ಅವಕಾಶವೇ ಬಿಕ್ಕಟ್ಟಿನದಾಗಿ, ಸಾಲಕ್ಕೆ ಖಾಸಗಿ ಜಮೀನುದಾರರನ್ನು ಆಶ್ರಯಿಸಬೇಕಾದ ಕಾಲ ಇತ್ತು. ಬ್ಯಾಂಕುಗಳು ಹಳ್ಳಿಗಳನ್ನು ಪ್ರವೇಶಿಸುತ್ತಿರುವುದರಿಂದ ಅಲ್ಲಿ ಸಾಲದ ಅವಕಾಶ, ಹೊಸ ಅವಕಾಶಗಳ ಸಾಧ್ಯತೆ ಹುಟ್ಟುತ್ತಿವೆ. ನಮ್ಮ ಗ್ರಾಮೀಣ ಪ್ರದೇಶದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಬ್ಯಾಂಕುಗಳು ಮುಖ್ಯ ಕಾರಣವಾಗಬಲ್ಲವು.

1969ರ ಮುಂಚೆ, ಅಂದರೆ ಮುಖ್ಯ 14 ಬ್ಯಾಂಕುಗಳ ರಾಷ್ಟ್ರೀಕರಣಕ್ಕೆ ಮುಂಚೆ, ಅವು ಮುಖ್ಯವಾಗಿ ನಗರ ಮತ್ತು ಪಟ್ಟಣಗಳಲ್ಲಿ ಕಾರ್ಯನಿರ್ವಹಿಸುತ್ತ ಗ್ರಾಮಗಳನ್ನು ಬಹುಮಟ್ಟಿಗೆ ನಿರ್ಲಕ್ಷಿಸಿದ್ದವು. ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ ಸಹವರ್ತಿಗಳನ್ನು ಬಿಟ್ಟರೆ ಉಳಿದೆಲ್ಲ ಪ್ರಮುಖ ಬ್ಯಾಂಕುಗಳು ಖಾಸಗಿ ಒಡೆತನದಲ್ಲಿದ್ದು, ಅವುಗಳ ಮುಖ್ಯ ಗುರಿ ಲಾಭದಾಯಕ ಬ್ಯಾಂಕಿಂಗ್ ಮಾತ್ರವಾಗಿತ್ತು. ವೃತ್ತಿಯಲ್ಲಿರುವ ಜನರಿಗೆ, ಉದ್ಯಮಿಗಳಿಗೆ, ವ್ಯವಹಾರಸ್ಥರಿಗೆ ಸರಿಹೊಂದುವಂತಹ ಯೋಜನೆಗಳು ಮತ್ತು ಕಾರ್ಯಸ್ವರೂಪ ಆ ದಿನಗಳಲ್ಲಿದ್ದುವು. ತ್ವರಿತ ಲಾಭತಾರದ ಹಳ್ಳಿಗಳತ್ತ ಅವುಗಳ ಗಮನ ಹರಿಯುತ್ತಿರಲಿಲ್ಲ; ಠೇವಣಿ ಸಂಗ್ರಹಕ್ಕೆ ನಗರಗಳು ಸಹಕಾರಿ. ರಾಷ್ಟ್ರೀಕರಣದ ಅನಂತರದ ವರುಷಗಳಲ್ಲಿ ಅಚ್ಚರಿ ಹುಟ್ಟಿಸುವ ಪ್ರಮಾಣದಲ್ಲಿ ಗ್ರಾಮೀಣ ಪ್ರದೇಶ ಬ್ಯಾಂಕಿಂಗ್‌ನ ವ್ಯಾಪ್ತಿಯಲ್ಲಿ ಸೇರಿಕೊಂಡಿದೆ. ರಿಸರ್ವ್ ಬ್ಯಾಂಕ್‌ನ ಪರಿಣಾಮಕಾರಿ ನೀತಿಯಿಂದ ಇದು ಸಾಧ್ಯವಾದದ್ದು ಭಾರತದ ಗ್ರಾಮೀಣ ಅಭಿವೃದ್ಧಿ ಸಾಧನೆಗಳಲ್ಲಿ ಒಂದು ಪ್ರಮುಖ ಹೆಜ್ಜೆ. 1981ರಲ್ಲಿ ವಾಣಿಜ್ಯ ಬ್ಯಾಂಕುಗಳ ಒಟ್ಟು ಶಾಖೆಗಳಲ್ಲಿ ಬರೇ ಶೇಕಡ 10ರಷ್ಟು ಮಾತ್ರ ಗ್ರಾಮೀಣ ಪ್ರದೇಶದಲ್ಲಿದ್ದುವು. 1982ರಲ್ಲಿ ಈ ಸಂಖ್ಯೆ ಸುಮಾರು ಶೇ. 16ರಷ್ಟಾಯ್ತು. 1985ರಲ್ಲಿ ಈ ಸಂಖ್ಯೆ ಸುಮಾರು ಶೇ. 25 ಆಗುವಂತೆ ಯೋಜಿಸಲಾಗಿತ್ತು. ವಾಸ್ತವವಾಗಿ ಬ್ಯಾಂಕ್‌ಗಳ ಹಳ್ಳಿ ಪ್ರವೇಶವು ಬಹು ಹಿಂದೆಯೇ ವ್ಯಾಪಕವಾಗಿ ಆಗಬೇಕಾಗಿದ್ದುದು ನಮ್ಮಂತಹ ದೇಶದ ಪ್ರಮುಖ ಆವಶ್ಯಕತೆಯೇ. ಆದರೆ ಹಲವಾರು ಚಾರಿತ್ರಿಕ ಕಾರಣಗಳಿಂದ ಅದು ಸಾಧ್ಯವಾಗದೆ, ಬಹುದಿನಗಳ ತನಕ ಬ್ಯಾಂಕ್ ಸೌಲಭ್ಯವನ್ನು ಗ್ರಾಮೀಣ ಜನರು ಪಡೆಯದಾದರು. ಈಗ ವ್ಯಾಪಕವಾಗಿರುವ ಗ್ರಾಮೀಣ ಬ್ಯಾಂಕಿಂಗ್ ಒಂದು ಶುಭ ಆರಂಭವೇ ಆಗಿದ್ದೀತು.

ಸಹಜವಾಗಿ, ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಜನರಿಗೆ ಅನುಕೂಲವಾಗುವಂತೆ ಕಾರ್ಯ ನಿರ್ವಹಿಸಬೇಕಾದುದು ಅವರ ಕರ್ತವ್ಯವಾಯ್ತು. ಪ್ರಾದೇಶಿಕ ಭಾಷೆಯ ಬಳಕೆಯ ಜೊತೆ, ಕಡಿಮೆ ತಿಳಿವಳಿಕೆಯ ಹಳ್ಳಿಗರನ್ನು ಆಕರ್ಷಿಸಲು ಮತ್ತು ಅವರಿಗೆ ಅರ್ಥವಾಗುವಂತೆ ಬ್ಯಾಂಕಿಂಗ್ ನಡೆಸಲು ಬ್ಯಾಂಕುಗಳು ಸರಳವಾಗಬೇಕಾಯ್ತು. ನಗರದಲ್ಲಿ ಸುಖವಾಗಿ ಓಡಾಡಿಕೊಂಡಿದ್ದ ಬ್ಯಾಂಕ್ ಉದ್ಯೋಗಿಗಳು ಹಳ್ಳಿಗಳ ಕಡುಮಣ್ಣಿನ ಧೂಳನ್ನು ಸೇವಿಸುವುದು ಅನಿವಾರ್ಯವಾಯ್ತು. ಸರಕಾರದ ಆದೇಶದಂತೆ ಶೇ. 11.5ರಿಂದ ಶೇ. 15ರ ಬಡ್ಡಿದರದಲ್ಲಿ ಕೃಷಿ ಸಾಲವನ್ನು ನೀಡುವದರ ಜೊತೆ, ಸಣ್ಣ ಉದ್ಯಮ ಮತ್ತು ಸಣ್ಣ ವ್ಯವಹಾರವೂ ಸೇರಿದ ಈ ಆದ್ಯತಾ ವಲಯದಲ್ಲಿ ಶೇ. 40ರಷ್ಟು ಸಾಲವನ್ನು ತೊಡಗಿಸಬೇಕಾದುದು ಅನಿವಾರ್ಯವಾಯ್ತು. ರೈತರಿಗೆ, ಮಧ್ಯಮ – ಕಿರುರೈತರಿಗೆ ಮತ್ತು ಕೃಷಿಕಾರ್ಮಿಕರಿಗೆ ಕೃಷಿಗಾಗಿ ಮತ್ತು ಕೃಷಿಯ ಪೂರಕ ವೃತ್ತಿಗಳಿಗೆ ಸಾಲ ದೊರೆಯುವದು ಸುಲಭವಾಯ್ತು. ಇದರಿಂದ ಗ್ರಾಮೀಣ ಜನರ ಜೀವನ ಮಟ್ಟ ಕ್ರಮೇಣ ಹೆಚ್ಚುವುದು ಸಹಜ. ವಾಣಿಜ್ಯ ಬಾಂಕುಗಳಲ್ಲಿ ದೊರೆಯುವ ಇತರ ಸೇವೆಗಳಾದ ಅಂಚೆ ರವಾನೆ, ವಟಾವಣೆ, ಡ್ರಾಫ್ಟ್, ಹುಂಡಿ ಮೊದಲಾದ ಸೌಲಭ್ಯಗಳು ಸಹ ಗ್ರಾಮೀಣ ಪ್ರದೇಶದಲ್ಲಿ ದೊರೆಯುವಂತಹ ಅವಕಾಶ ದೊರೆಯಿತು.

ಗ್ರಾಮಗಳಿಗೆ ವಾಣಿಜ್ಯ ಬ್ಯಾಂಕುಗಳ ಪ್ರವೇಶಕ್ಕಿಂತ ಮುಂಚೆ ಅಲ್ಲಿ ಸಹಕಾರಿ ಸಂಘಗಳು ಮತ್ತು ಅಂಚೆ ಕಛೇರಿಗಳು ಗ್ರಾಮೀಣರ ಕೆಲವು ಆವಶ್ಯಕತೆಗಳನ್ನು ಪೂರೈಸುತ್ತಿದ್ದುದೇನೊ ನಿಜ. ಆದರೆ ಸಹಕಾರಿ ಸಂಘಗಳ ರಾಜಕೀಯ ದುರುಪಯೋಗ, ಮೋಸದ ವ್ಯವಹಾರ ಮತ್ತು ಅಕ್ರಮ ಕಾರ್ಯಗಳಿಂದ ಅವು ವಿಫಲವಾದವು; ಅಂಚೆ ಕಛೇರಿಯಲ್ಲಿ ಕಿಟಕಿಯಿಂದ ಹೊರಗೆ ನಿಯಮಿತ ಬ್ಯಾಂಕಿಂಗ್ ದೊರೆಯುವದಾದರೂ, ಅಲ್ಲಿನ ಕಠಿಣತೆ ಮತ್ತು ಅಭದ್ರತೆಯಿಂದ ಸಾಕಷ್ಟು ಉಪಯೋಗ ದೊರಕಿರಲಿಲ್ಲ. ಮಿಗಿಲಾಗಿ ವಟಾವಣೆ, ಅಂಚೆರವಾನೆ, ಡ್ರಾಫ್ಟ್ ಮುಂತಾದ ಸೇವೆಗಳು ಮೇಲೆ ಹೇಳಿದ ಸಂಸ್ಥೆಗಳಲ್ಲಿ ದೊರೆಯುತ್ತಿರಲಿಲ್ಲ. ಜೊತೆಗೆ ವಾಣಿಜ್ಯ ಬ್ಯಾಂಕುಗಳು ಸಿಬ್ಬಂದಿ ಪಡೆದಿದ್ದ ತರಬೇತಿ ಮೇಲಿನ ಸಂಸ್ಥೆಗಳಿಗಿಲ್ಲದ್ದರಿಂದ, ವಾಣಿಜ್ಯ ಬ್ಯಾಂಕುಗಳು ಪರಿಣಾಮಕಾರಿಯಾಗಿ ಹಳ್ಳಿಗಳಲ್ಲಿ ಕಾರ್ಯನಿರ್ವಹಿಸುತ್ತಿವೆ.

### ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪ್ರವೇಶ

1975ರ ಅಕ್ಟೋಬರ್ 2ರಂದು ಆರಂಭವಾದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಇಂದು ಉತ್ಕರ್ಷದಲ್ಲಿವೆ. ಗ್ರಾಮೀಣ ಪ್ರದೇಶಗಳಿಗಾಗಿಯೇ ರೂಪಿಸಲ್ಪಟ್ಟ ಇವುಗಳ ವ್ಯಾಪಕತೆಯಿಂದಾಗಿ ಆ ಪ್ರದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳ ಬಳಕೆಯ ಸ್ವರೂಪ ಬದಲಾಗುವ ಚಿಹ್ನೆಗಳು ಕಾಣುತ್ತಿವೆ; ಆದರೂ ವಾಣಿಜ್ಯ ಬ್ಯಾಂಕುಗಳ ವ್ಯಾಪ್ತಿ ಇನ್ನೂ ಹೆಚ್ಚು ವಿಸ್ತರಿಸೀತು. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಕಾರ್ಯನಿರ್ವಹಣೆ ಎಷ್ಟೆಂದರೂ ಮಿತ ಸ್ವರೂಪದ್ದು ಮತ್ತು ಸಣ್ಣ ರೈತರಿಗಾಗಿ ಹೆಚ್ಚು ನಿಗಾ ವಹಿಸುವ ಇವುಗಳ ವ್ಯಾಪ್ತಿ ಸೀಮಿತದ್ದು. ದೊಡ್ಡ ಮೊತ್ತದ ಕೃಷಿ ಸಾಲ, ಅಂಚೆ ರವಾನೆ,

ಎಂ. ಶಶಿಧರ, ಮೈಸೂರು ಬ್ಯಾಂಕ್, ಕಣಕಟ್ಟೆ, ಅರಸೀಕೆರೆ ತಾಲ್ಲೂಕು 573 144

ವಟಾಯಿಸುವಿಕೆ, ಡ್ರಾಫ್ಟ್ ಮುಂತಾದ ವಿಚಾರಗಳು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಲ್ಲಿ ಇಲ್ಲದ್ದರಿಂದ, ವಾಣಿಜ್ಯ ಬ್ಯಾಂಕುಗಳ ಬಳಕೆ ಹಳ್ಳಿಗಳಲ್ಲಿ ಮುಂದಿನ ಹಲವು ವರುಷಗಳ ತನಕ ಮುಂದು ವರಿದೀತು. ಇದೇ ಸಮಯದಲ್ಲಿ, ಕೃಷಿ ಕಾರ್ಮಿಕರಿಗೆ ಮತ್ತು ಅತಿ ಸಣ್ಣ ರೈತರಿಗೆ ನೆರವಾಗುವ ಗ್ರಾಮೀಣ ಬ್ಯಾಂಕುಗಳ ಬೆಳವಣಿಗೆಗೆ ಮಾರಕವಾಗದಂತೆ ಕಾರ್ಯನಿರ್ವಹಿಸಬೇಕಾದದು ವಾಣಿಜ್ಯ ಬ್ಯಾಂಕುಗಳ ಕರ್ತವ್ಯ. ತಾವೇ ಹುಟ್ಟುಹಾಕಿದ ಈ ಮರಿ ಬ್ಯಾಂಕುಗಳು ದಷ್ಟ ಪುಷ್ಟವಾಗಿ ಬೆಳೆಯುವಂತೆ ನೋಡಿಕೊಳ್ಳುವುದು ಸಹ ವಾಣಿಜ್ಯ ಬ್ಯಾಂಕುಗಳ ಕರ್ತವ್ಯ. ಈ ಎರಡೂ ಬಗೆಯ ಬ್ಯಾಂಕುಗಳನ್ನು ಬಳಸುವ ಅವಕಾಶ ಗ್ರಾಮೀಣ ಜನರಿಗಿರುವುದು ಒಂದು ರೀತಿಯಲ್ಲಿ ಅನುಕೂಲ.

### ಗ್ರಾಮೀಣ ಪ್ರದೇಶದಲ್ಲಿ ಸಾಲಗಳು

ವಾಣಿಜ್ಯ ಬ್ಯಾಂಕುಗಳು ನಗರದಲ್ಲಿ ನೀಡುವ ಬಹುಮಟ್ಟಿನ ಎಲ್ಲ ಸಾಲಗಳನ್ನೂ ಗ್ರಾಮೀಣ ಪ್ರದೇಶದಲ್ಲಿ ನೀಡಿದರೂ, ವಿಶೇಷ ವಾಗಿ ಕೆಲವು ಸಾಲಗಳು ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಸೀಮಿತ ವಾಗಿವೆ. ಮುಖ್ಯವಾಗಿ ಕೃಷಿ ಸಾಲಗಳು—ಈ ವಿಭಾಗದಲ್ಲಿ ಅಲ್ಪಾ ವಧಿ ಸಾಲ ಮತ್ತು ದೀರ್ಘಾವಧಿ ಸಾಲಗಳು ಸೇರಿವೆ. ಬೆಳೆ ಬೆಳೆಯಲು, ಬೀಜ-ಗೊಬ್ಬರ-ಕೀಟನಾಶಕ-ಉಪಕರಣ ಖರೀದಿಗೆ ಅಲ್ಪಾವಧಿ ಸಾಲಗಳನ್ನು ನೀಡಿದರೆ, ದೀರ್ಘಾವಧಿ ಸಾಲಗಳನ್ನು ಇತರ ಹೆಚ್ಚಿನ ಉದ್ದೇಶಗಳಿಗೆ ನೀಡಲಾಗುತ್ತದೆ. ಅವುಗಳಲ್ಲಿ ಕೆಲ ವನ್ನು ಹೆಸರಿಸಬೇಕೆಂದರೆ ಟ್ರ್ಯಾಕ್ಟರ್ ಇತ್ಯಾದಿ ಯಂತ್ರಗಳನ್ನು ಕೊಳ್ಳಲು, ಕಾಫಿ ಬೆಳೆಗೆ, ಜಾನುವಾರುಗಳನ್ನು ಕೊಳ್ಳಲು, ನೀರಾವರಿಗೆ, ಕೊಳವೆ ಬಾವಿಗೆ, ಎತ್ತಿನಗಾಡಿ ಇತ್ಯಾದಿ ಇದರ ಜೊತೆ ಯಲ್ಲಿ ಕೃಷಿ ಸಂಬಂಧಿ ವೃತ್ತಿಗಳಾದ ಕೋಳಿ ಸಾಕಣೆ, ದನ ಸಾಕಣೆ, ಡೈರಿ, ಕುರಿ, ಹಂದಿ, ಆಡು, ಕತ್ತೆ, ರೇಷ್ಮೆ ಸಾಕಣೆ ಇತ್ಯಾದಿ ಉದ್ದೇಶ ಗಳಿಗೂ ಸಾಲ ಲಭ್ಯವಿದೆ. ಇವುಗಳಲ್ಲಿ ಭಿನ್ನಕ ಬಡ್ಡಿದರದಲ್ಲೂ ಸಾಲ ದೊರಕೀತು. ಗೊಬ್ಬರದ ಅಂಗಡಿಗಳಿಗೂ ಸಾಲ ಕೊಡಲಾಗುತ್ತದೆ.

ಅಲ್ಲದೆ ಗುಡಿ ಕೈಗಾರಿಕೆ, ಸಣ್ಣ ಕೈಗಾರಿಕೆ, ಕುಶಲಕಲಾ ಕಾರ್ಮಿಕ ರಿಗೂ ಗ್ರಾಮೀಣ ಪ್ರದೇಶದ ವಾಣಿಜ್ಯ ಬ್ಯಾಂಕುಗಳು ಸಾಲ ನೀಡು ತ್ತವೆ. ಮುಖ್ಯವಾಗಿ ಸಣ್ಣ ಕೈಗಾರಿಕೆ ಮತ್ತು ಸಣ್ಣ ವ್ಯವಹಾರ ವಿಭಾಗದ ವ್ಯಾಪಕ ಸಾಲದಿಂದಾಗಿ ಹಳ್ಳಿಯ ಜನರು ನಗರಗಳಿಗೆ ವಲಸೆ ಹೋಗುವದನ್ನು ತಪ್ಪಿಸಬಹುದು. ಇತ್ತೀಚಿನ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದ ಗ್ರಾಮೀಣಪ್ರದೇಶದ ಸಣ್ಣ ರೈತರಿಗೆ ಸಾಲ ದೊರೆಯುವುದು ಸುಲಭವಾಗಿದೆ ಮತ್ತು ಅದರಿಂದ ಈ ಪ್ರದೇಶದ ಜನರು ಬೆಳೆದಾರೆಂದು ತಿಳಿಯಲಾಗಿದೆ.

### ವಿಶೇಷ ಠೇವಣಿ ಯೋಜನೆಗಳು

ಬಹುಶಃ ನಮ್ಮಲ್ಲಿ ಅತ್ಯಂತ ಕಡೆಗಣಿಸಲ್ಪಟ್ಟ ಠೇವಣಿದಾರ ನೆಂದರೆ ಗ್ರಾಮೀಣ ಗ್ರಾಹಕ. ವಾಣಿಜ್ಯ ಬ್ಯಾಂಕುಗಳಲ್ಲಿ ಹೆಚ್ಚಿನ ಠೇವಣಿ ಯೋಜನೆಗಳು ಮಾಸಿಕ ಸಂಬಳದವರಿಗೂ ವ್ಯವಹಾರಸ್ಥ ರಿಗೂ ವಿನ್ಯಾಸಗೊಳಿಸಲ್ಪಟ್ಟಿವೆ. ದೇಶದ ಬೆನ್ನೆಲುಬಾದ ರೈತರಿ ಗಾಗಿಯೆ ಯೋಜಿಸಲ್ಪಟ್ಟ ಠೇವಣಿಗಳು ಬ್ಯಾಂಕುಗಳಲ್ಲಿ ಹೆಚ್ಚು ಪ್ರಚಾರಕ್ಕೆ ಬರುವ ಆವಶ್ಯಕತೆಯಿದೆ. ವರ್ಷಕ್ಕೊಮ್ಮೆ ಕಟ್ಟುವಂತಹ ಸಂಚಯಿತ ಖಾತೆಗಳು, 25 ಅಥವಾ ಹೆಚ್ಚಿನ ವರ್ಷಗಳಲ್ಲಿ ಪಕ್ವವಾಗು ವಂತಹ ಠೇವಣಿಗಳು ಅಥವಾ ಇತರ ಉಚಿತ ರೀತಿಯ ಠೇವಣಿ ಯೋಜನೆಗಳು ಗ್ರಾಮೀಣ ಪ್ರದೇಶದವರಿಗಾಗಿಯೇ ವಿನ್ಯಾಸಗೊಳಿಸ ಲ್ಪಡಬೇಕು. ರೈತರ ಮುದಿದಿನಗಳಲ್ಲಿ ಭವಿಷ್ಯನಿಧಿ ಮೊದಲಾದ ಅವಕಾಶಗಳು ಇಲ್ಲದ್ದರಿಂದ, ಈ ರೀತಿಯ ಠೇವಣಿಗಳನ್ನೇ ಭವಿಷ್ಯ ನಿಧಿಯಂತೆ ಕೊಡಿಸುವ ವ್ಯವಸ್ಥೆಯನ್ನು ಮಾಡಲು ಸಾಧ್ಯ. ಈ ನಿಟ್ಟಿ ನಲ್ಲಿ ವಾಣಿಜ್ಯ ಬ್ಯಾಂಕುಗಳು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕು.

### ಪ್ರಾದೇಶಿಕ ಭಾಷೆಯ ಬಳಕೆ

ಗ್ರಾಮೀಣ ಪ್ರದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳು ಇನ್ನೂ ಇಂಗ್ಲಿಷನ್ನೇ ತಮ್ಮ ಸಕಲ ವ್ಯವಹಾರಗಳಿಗೆ ಬಳಸುವುದನ್ನು ಮುಂದು ವರಿಸುತ್ತಿವೆ. ಆಂಗ್ಲರ ಗುಲಾಮತನದಿಂದ ಮುಕ್ತರಾಗಿ ಹತ್ತಿರ ಹತ್ತಿರ ನಾಲ್ಕು ದಶಕಗಳೇ ಕಳೆದರೂ, ಅವರ ಭಾಷೆಯ ಗುಲಾಮ ತನ ನಮ್ಮಲ್ಲಿ ಎದ್ದುಕಾಣುತ್ತಿದೆ. ರೈತರ ಠೇವಣಿಗಳನ್ನು ಬ್ಯಾಂಕು ಗಳಲ್ಲಿರಿಸಿಕೊಂಡು, ಅವರಿಗೆ ಅರ್ಥವೇ ಆಗದ, ಅಥವಾ ಅಕ್ಷರ ಗುರು ತಿಸುವಷ್ಟು ಮಾತ್ರ ಅರ್ಥವಾಗುವ ಆಂಗ್ಲಭಾಷೆಯಲ್ಲಿ ಪಾಸುಪುಸ್ತಕ ಗಳನ್ನು ಮತ್ತು ಠೇವಣಿ ರಸೀತಿಗಳನ್ನು ಬರೆದು ಕೊಡುವುದು ಒಂದು ರೀತಿಯ ಮೋಸವೆಂದರೂ ತಪ್ಪಿಲ್ಲ. ಪ್ರಾದೇಶಿಕ ಭಾಷೆಯಲ್ಲಿ ಎಲ್ಲ ವ್ಯವಹಾರ ನಡೆಸಬೇಕಾಗುವ ದಿನ ಬಂದರೆ ಸಂತೋಷ. ಅಷ್ಟಲ್ಲ ದಿದ್ದರೂ, ಗ್ರಾಹಕರೊಡನೆ ಸಂಪರ್ಕ ಬರುವ ಎಲ್ಲ ನಮೂನೆ, ಪುಸ್ತಕ ಮತ್ತು ರಸೀತಿಗಳು ಪ್ರಾದೇಶಿಕ ಭಾಷೆಯಲ್ಲಿದ್ದು, ಅವನ್ನು ಪ್ರಾದೇ ಶಿಕ ಭಾಷೆಯಲ್ಲೇ ತುಂಬಿಸಿಕೊಡುವ ವ್ಯವಸ್ಥೆಯನ್ನು ವಾಣಿಜ್ಯ ಬ್ಯಾಂಕುಗಳು ತರಬೇಕಾದುದು ಅಗತ್ಯ. ಇದರಿಂದ ಹೆಚ್ಚಿನ ವ್ಯವ ಹಾರಕ್ಕೂ ಅನುಕೂಲವಾದೀತು.

ಗ್ರಾಮೀಣ ಪ್ರದೇಶಗಳಿಗೂ ನಗರಗಳಿಗೂ ಒಂದು ಉತ್ತಮ ಕೊಂಡಿಯಂತೆ ವಾಣಿಜ್ಯ ಬ್ಯಾಂಕುಗಳು ವರ್ತಿಸುವ ಅವಕಾಶ ಬಹಳ ಇದೆ. ಹಳ್ಳಿಯಲ್ಲಿ ಅಕ್ಷರತೆಯನ್ನು ಹೆಚ್ಚಿಸಲು, ಪರಿಸರವನ್ನು ಸಂರಕ್ಷಿ ಸಲು, ಆರೋಗ್ಯವನ್ನು ಕಾಪಾಡಲು ನವೋನ್ಮೇಷ ಬ್ಯಾಂಕಿಂಗಿನಿಂದ ಸಾಧ್ಯವಿದೆ. ಗ್ರಾಮೀಣ ಪ್ರದೇಶದಲ್ಲಿ ವಾಣಿಜ್ಯ ಬ್ಯಾಂಕುಗಳ ಸಾಮಾಜಿಕ ಮತ್ತು ಆರ್ಥಿಕ ಹೊಣೆ ಅಗಾಧವಾದುದರಿಂದ ಉದರಿ ಯನ್ನು ದೊರಕಿಸುವುದರ ಜೊತೆಗೆ ಉತ್ತಮ ಜನಸಂಪರ್ಕ ಮತ್ತು ಉಪಕಾರಿ ನವೋನ್ಮೇಷ ಬ್ಯಾಂಕಿಂಗಿನ ಆದರ್ಶ ಪಾತ್ರವನ್ನು ಅವು ವಹಿಸಬಹುದು.



# 1980ರ ದಶಕದಲ್ಲಿ ಬ್ಯಾಂಕುಗಳು ಹಾಗೂ ತಂತ್ರವಿಜ್ಞಾನ


ಮೂಲ: ಐನಾನ್ ಸ್ಮಾರ್ಟ್ ಎಐಬಿ
ಅನುವಾದ: ಸಾಮೂಹಿಕ


ಇದು ಮಾಹಿತಿ ತಂತ್ರವಿಜ್ಞಾನ ವರ್ಷವಾಗಿರುವುದಕ್ಕೆ ಅನುಗುಣವಾಗಿ 'ಬ್ಯಾಂಕುಗಳು ಹಾಗೂ ಅವುಗಳ ವ್ಯವಹಾರಗಳ ಮೇಲೆ ವಿಕಸನಶೀಲ ತಂತ್ರವಿಜ್ಞಾನದ ಪರಿಣಾಮಗಳು' ಎಂಬುದು ಈ ಸೆಪ್ಟೆಂಬರಿನ ಕೇಂಬ್ರಿಜ್ ವಿಚಾರ ಸಂಕಿರಣದ ವಸ್ತುವಾಗಿತ್ತು. ನಾಲ್ಕು ದಿನಗಳ ಚರ್ಚೆ ಮತ್ತು ಪ್ರಶ್ನೋತ್ತರಗಳಲ್ಲಿ ವ್ಯಕ್ತವಾದ ಭಾಷಣಕಾರರ ಮತ್ತು ಭಾಗಿಗಳ ಚಿಂತನೆಯ ಸಾರಾಂಶವನ್ನು ಕೊಡಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ. ಇದು ಮೇಲ್ನೋಟದ್ದಾಗಿರುವುದು ಅನಿವಾರ್ಯ.

ಜೀವನಕ್ಕೆ ಸಂಬಂಧಿಸಿದ ಇತರ ಜ್ಞಾನಕ್ಷೇತ್ರಗಳಲ್ಲಿರುವಂತೆ ಅರ್ಥಶಾಸ್ತ್ರದಲ್ಲಿಯೂ ಪ್ರವಾದಿಗಳ ದಾಖಲೆ ಚೆನ್ನಾಗಿಲ್ಲ. ವಿದ್ಯುದ್ದೀಪದ ಉಪಜ್ಞೆಯ ವಿಚಾರ ಅನಿಲಕೈಗಾರಿಕೆಗೆ ತಿಳಿದು ಬಂದಾಗ ಆ ಬಗ್ಗೆ ತನಿಖೆ ನಡೆಸಲು ಉನ್ನತಾಧಿಕಾರ ಸಮಿತಿಯೊಂದು ಅಮೆರಿಕಕ್ಕೆ ಹೋಯಿತು. ಗಾಬರಿಗೆ ಕಾರಣವಿಲ್ಲವೆಂದೂ ವಿದ್ಯುದ್ದೀಪಕ್ಕೆ ಭವಿಷ್ಯವಿಲ್ಲವೆಂದೂ ವರದಿಮಾಡಿತು.

ಇತ್ತೀಚೆಗೆ, ವಿಶ್ವ ಅರ್ಥವ್ಯವಸ್ಥೆ ಇಂದು ಯಾವ ಸ್ಥಿತಿಯಲ್ಲಿದೆಯೋ ಅರ್ಧ ಶತಮಾನದ ಹಿಂದೆ ಹೆಚ್ಚು ಕಡಿಮೆ ಅದೇ ಸ್ಥಿತಿಯಲ್ಲಿದ್ದಾಗ, ಪ್ರಪಂಚ ಜಡಸ್ಥಿತಿಯನ್ನು ತಲುಪಿದೆಯೆಂದು–ಎಂದರೆ ಜನಸಂಖ್ಯೆ ಇಳಿಯುವುದೆಂದು, ಯುದ್ಧೋತ್ತರ ಪುನರ್ನಿರ್ಮಾಣದ ಉತ್ಕರ್ಷಗಳನ್ನುಂಟುಮಾಡುವಂಥ ಯುದ್ಧಗಳು ಇರುವುದಿಲ್ಲವೆಂದು ಮತ್ತು ವೈಜ್ಞಾನಿಕ ಸಂಶೋಧನೆಯಿಂದ ಇನ್ನಷ್ಟು ಬೆಳವಣಿಗೆಯೇನೂ ಆಗುವುದಿಲ್ಲ ಎಂದು—ಅಮೆರಿಕದ ಬೃಹತ್ ಸಂಶೋಧನೆಯಿಂದ ಸಾಬೀತಾಯಿತು. ಜೀವನದಲ್ಲಿ ಮುಂದೇನಾಗುವುದೆಂದು ಹೇಳಲಾಗದೆಂಬುದಕ್ಕೆ ಇಂತಹ ಹಲವು ನಿದರ್ಶನಗಳನ್ನು ಇತಿಹಾಸ ಸೃಷ್ಟಿಸುತ್ತದೆ. ಆದರೆ ಭವಿಷ್ಯಕ್ಕಾಗಿ ಜಾಣತನದಿಂದ ಯೋಜಿಸುವ ಪ್ರಯತ್ನಗಳನ್ನು ನಾವು ಕೈಬಿಟ್ಟಲ್ಲಿ ಜೀವನ ಇನ್ನೂ ಕಷ್ಟಕರವಾಗುತ್ತದೆ. ನಮ್ಮ ಸುತ್ತ ಆಗುತ್ತಿರುವ ಗಮನಾರ್ಹ ತಂತ್ರವಿಜ್ಞಾನಾತ್ಮಕ ಅಭಿವೃದ್ಧಿಗಳು ಒಟ್ಟು ಸಮಾಜಕ್ಕೆ ಮತ್ತು ನಮ್ಮದೇ ಆದ ಬ್ಯಾಂಕಿಂಗ್ ಕ್ಷೇತ್ರದಂತಹ ಪ್ರತ್ಯೇಕ ವಲಯಗಳಿಗೆ ಭವಿಷ್ಯವನ್ನು ಪ್ರತೀಕ್ಷಿಸುವ ಪ್ರಯತ್ನ ಜರೂರಾಗಿಸುವಂತಹ ಅವಕಾಶಗಳನ್ನು ಹಾಗೂ ಸಮಸ್ಯೆಗಳನ್ನು ಸೃಷ್ಟಿಸುತ್ತದೆ.

ಮಾಹಿತಿ ತಂತ್ರವಿಜ್ಞಾನ ಒಂದು ಚದುರಿಹೋದ ವಿಷಯ. ಇದು 'ಮಾತಂ' ವರ್ಷ ಎಂದ ಮಾತ್ರಕ್ಕೆ, 'ಮಾತಂ' ಈ ವರ್ಷ ಆರಂಭವಾಯಿತೆಂದೇನೂ ಅರ್ಥವಲ್ಲ. ಇದಕ್ಕೊಂದು ದೀರ್ಘ ಇತಿಹಾಸವಿದೆ. ದೂರವಾಣಿ ಮತ್ತು ತಂತಿಯನ್ನು, ಇತ್ತೀಚೆಗೆ ರಂಗಪ್ರವೇಶ ಮಾಡಿದ ಗಣಕಗಳನ್ನು ಕೂಡ, ಈ ಇತಿಹಾಸ ಖಂಡಿತವಾಗಿ ಒಳಗೊಂಡಿದೆ. ಲೇಸರುಗಳನ್ನು, ತಂತುದರ್ಶಕಗಳು ಮತ್ತು ಉಪಗ್ರಹಗಳು—ಇವುಗಳನ್ನು ಈಗ ಇದು ಒಳಗೊಂಡಿದೆ ಮತ್ತು ಇನ್ನೂ ಹೆಚ್ಚಿನದು ಖಂಡಿತ ಬರಲಿದೆ.

ಪ್ರಚಲಿತ ಬೆಳವಣಿಗೆಗಳ ವೇಗವು ಕ್ರಾಂತಿಕಾರಕ ಬದಲಾವಣೆಯ ಅವಧಿಯಲ್ಲಿ ನಾವಿದ್ದೇವೆ ಎಂದು ಸೂಚಿಸುವಷ್ಟು ತೀವ್ರವಾಗಿದೆ. ಈ ಸಂದರ್ಭದಲ್ಲಿ ಕ್ರಾಂತಿ ಎಂಬ ಶಬ್ದದ ಬಳಕೆಯು ಕೈಗಾರಿಕಾ ಕ್ರಾಂತಿಯ ಗೌರವಪೂರ್ಣ ಪೂರ್ವನಿದರ್ಶನವನ್ನು ಹೊಂದಿದೆ. ಇಂದಿನ ತಂತ್ರವಿಜ್ಞಾನಾತ್ಮಕ ಮುನ್ನಡೆಗಳು ಕ್ರಾಂತಿಕಾರಕ ಎನ್ನುವುದಕ್ಕಿಂತ ವಿಕಸನಶೀಲ ಎಂದು ವಾದಿಸಬಹುದಾಗಿದೆ. ತಂತ್ರವಿಜ್ಞಾನ ಕಳೆದ ಒಂದು ದಶಕಕ್ಕಿಂತ ಹೆಚ್ಚು ದೀರ್ಘ ಸಮಯದಿಂದ ಮುನ್ನಡೆಯುತ್ತಿದೆ ಮತ್ತು ನಮಗೆ ಇಂದು ಸಂಗತವಾಗಿರುವ ಫಲಗಳನ್ನು ನೀಡುತಿದೆ. ವಿದ್ಯುದ್ದೀಪದ ಉಪಜ್ಞೆಯಿಂದ ಬತ್ತಿ ತಯಾರಕರಿಗೆ ಹಾನಿಯೇನೂ ತಟ್ಟದೆಂದು ಸಮಿತಿ ವರದಿ ನೀಡಿದ್ದಾಗ್ಯೂ ಅದರ ತಯಾರಕರಿಗೆ ನಿರುದ್ಯೋಗವನ್ನು ಉಂಟುಮಾಡುವಂತಹ ತಂತ್ರವಿದ್ಯಾತ್ಮಕ ಮುನ್ನಡೆ ಆದಾಗಿತ್ತು. ನೇರ ಡಯಲಿಂಗು ದೂರವಾಣಿ ಪರಿಚಾಲಕರನ್ನು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾನಪಲ್ಲಟಗೊಳಿಸುವಂತಹ ತಂತ್ರವಿಜ್ಞಾನಾತ್ಮಕ ಮುನ್ನಡೆಯಾಗಿತ್ತು. ಆದರೆ ವಿಕಾಸಸಿದ್ಧಾಂತ

ಮೂಲ: ಐನಾನ್ ಸ್ಮಾರ್ಟ್, ಎಐಬಿ, ಜರ್ನಲ್ ಆಫ್ ದಿ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಬ್ಯಾಂಕರ್ಸ್, ಡಿಸೆಂಬರ್ 1982

ಅನುವಾದಕರು: ಕೆ. ಎಸ್. ಮಹಾಬಲ, ಸಂಪಾದಕ, 'ಸಂವಹನ'; ಕೆ. ಜನಾರ್ದನ ತುಂಗ, ಅಧ್ಯಕ್ಷ, ಬರೋಡ ಬ್ಯಾಂಕ್, ಕನ್ನಡ ಸಂಘ, ಬೆಂಗಳೂರು–560 009; ಪದ್ಮಾ ಕಲ್ಮಾಡಿ, ಭಾರತೀಯ ಸ್ಟೇಟ್ ಬ್ಯಾಂಕ್, ವೀರಾಜಪೇಟೆ 571 218; ಹೆಚ್. ಬಿ. ರವೀಂದ್ರ, ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ರಾಜಾಜಿನಗರ, ಬೆಂಗಳೂರು 560 044; ಜಿ. ಸುರೇಂದ್ರ, ಕಾರ್ಪೊರೇಷನ್ ಬ್ಯಾಂಕ್, ಸುಭೇದಾರ್ ಛತ್ರಂ ರಸ್ತೆ, ಬೆಂಗಳೂರು 560 009; ಶ್ರೀಧರ ರಾಯಸಂ, ಕಾರ್ಯದರ್ಶಿ, ಕನ್ನಡ ಬಳಗ, ಮೈಸೂರು ಬ್ಯಾಂಕು, ಬಳ್ಳಾರಿ 583 101; ಕೆ. ವಿ. ವಿಮಲಾಂಬ, ಮೈಸೂರು ಬ್ಯಾಂಕ್, ಬಳ್ಳಾರಿ 583 101; ಗಿರಿಧರ ಕಾರ್ಕಳ, ಕಾರ್ಯದರ್ಶಿ, ಕನ್ನಡ ಬಳಗ, ಮೈಸೂರು ಬ್ಯಾಂಕು, ಮುಖ್ಯ ಶಾಖೆ, ಮೈಸೂರು 570 001; ಜಿ. ಎನ್. ನರಸಿಂಹಮೂರ್ತಿ, ನಗದು ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಹೊಸತರಗು ಪೇಟೆ ಶಾಖೆ, ಬೆಂಗಳೂರು 560 002. ಬಿ. ಎಸ್. ಚಂದ್ರಶೇಖರ, ಅಧ್ಯಕ್ಷ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಶಾಖೆ, ಬೆಂಗಳೂರು 560 002; ಪಾ. ರಾಜಗೋಪಾಲ, ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ; ತೆಕ್ಕಟ್ಟೆ ರಾಮಚಂದ್ರಭಟ್, ಕಾರ್ಯದರ್ಶಿ, ಕನ್ನಡ ಬಳಗ, ಮೈಸೂರು ಬ್ಯಾಂಕು, ಮಂಡ್ಯ ಶಾಖೆ 571 401; ವೈ. ಎಸ್. ಉಷಾ, ಭಾರತೀಯ ಸ್ಟೇಟ್ ಬ್ಯಾಂಕ್, ಕುಮಾರ ಪಾರ್ಕ್ ಶಾಖೆ, ಬೆಂಗಳೂರು 560 020; ಅತ್ತೂರು ಜೈಯ್ಯಬ್ಬ, ಮೈಸೂರು ಬ್ಯಾಂಕ್, ಕನ್ನಿಂಗ್‌ಹ್ಯಾಂ ರಸ್ತೆ ಶಾಖೆ, ಬೆಂಗಳೂರು 560 052; ಎಂ. ಶಶಿಧರ, ಮೈಸೂರು ಬ್ಯಾಂಕು, ಕಣಕಟ್ಟೆ 573 001; ಟಿ. ಎಸ್. ನಾಗಾನಂದ, ಅಖಿಲ ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥ. ಪ್ರ. ಕ., ಬೆಂಗಳೂರು 560 001; ಬೆಂ.ಶ್ರೀ. ರವೀಂದ್ರ, ಉಪಾಧ್ಯಕ್ಷ, ಸಮನ್ವಯ ಸಮಿತಿ; ಜಿ. ಬಿ. ಮುಂಡರಗಿ, ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಪ್ರಾದೇಶಿಕ ಕಛೇರಿ, ಹುಬ್ಬಳ್ಳಿ 580 020; ಟಿ. ಕೆ. ರಂಗನಾಥ, ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಪೀಣ್ಯ ಕೈಗಾರಿಕಾ ವಸಾಹತು ಶಾಖೆ, ಪೀಣ್ಯ, ಬೆಂಗಳೂರು

ವನ್ನು ಅವಲಂಬಿಸುವುದು, ಬದಲಾವಣೆಯ ಬಗೆಗಿನ ಮಾನವ ಸಹಜ ಅವಿಶ್ವಾಸದ ಭಾಗವಾದ ಸಂತೃಪ್ತಿಯ ಪ್ರವೃತ್ತಿಯನ್ನು ಬಲಪಡಿಸಬಹುದು. ಸದ್ಯದಲ್ಲಿ ಊಹಿಸಬಹುದಾದ ಯಾವುದೇ ಅಗತ್ಯಗಳನ್ನು ಮೀರಿದ ಸಾಮರ್ಥ್ಯಗಳನ್ನು ಉಂಟುಮಾಡುವ ಭರವಸೆಗಳನ್ನು ನೀಡುವ, ನಿಸ್ಸಂದೇಹವಾಗಿಯೂ ತುಂಬಾ ತ್ವರಿತವಾಗಿ ಬದಲಾಗುತ್ತಿರುವ ತಂತ್ರವಿಜ್ಞಾನಾತ್ಮಕ ಸನ್ನಿವೇಶದಲ್ಲಿ ನಮ್ಮನ್ನು ಜಾಗ್ರತವಾಗಿಡಬಹುದಾದಂಥ ಎಚ್ಚರಿಕೆಯ ಅನುರಣನಗಳು 'ಕ್ರಾಂತಿ' ಪದದಲ್ಲಿದೆ. ಕಣ್ಣುಮುಚ್ಚಿ ಕುಳಿತು ಅಪಾಯವೇ ಇಲ್ಲವೆಂದು ಭ್ರಮಿಸುವ ಉಷ್ಟ್ರಪಕ್ಷಿಸದೃಶ ಹಠಸ್ವಭಾವದ ಜನರು ಮಾತ್ರ ಮಾಹಿತಿ ತಂತ್ರವಿಜ್ಞಾನವನ್ನು ಅಲಕ್ಷಿಸಬಹುದು.

## ಕ್ಷಿಪ್ರ ಬದಲಾವಣೆಯೇ ?

ಸಮಾಜದಲ್ಲಿ ಮತ್ತು ಬ್ಯಾಂಕಿಂಗ್ ವಲಯದಲ್ಲಿ ಸಂಭವಿಸುವ ಬದಲಾವಣೆಗಳು ಎಷ್ಟು ತ್ವರಿತವಾಗಿವೆಯೆಂಬುದು ಅನಿಶ್ಚಿತ. ಯಾವುದೇ ಲೆಕ್ಕಾಚಾರದಲ್ಲೂ ಬದಲಾವಣೆಗೆ ಮಾನವ ಪ್ರತಿರೋಧ ಒಂದು ಚಲ ಅಂಶ. ಈ ಅಂಶ ಯಾವುದೇ ನಿರ್ದಿಷ್ಟ ಬೆಳವಣಿಗೆಯ ಸ್ವರೂಪವನ್ನು ಅವಲಂಬಿಸಿರುತ್ತದೆ. ಕಛೇರಿಯ ಎಲ್ಲ ಕೆಲಸವನ್ನು ಮನೆಯಲ್ಲೇ ಮಾಡಬಹುದಾದಂಥ ಸಂಭಾವ್ಯ ಸಾಧ್ಯತೆಗೆ ದಿನದಿನವೂ ಮನೆಯನ್ನು ಬಿಟ್ಟು ಹೊರಗೆ ಹೋಗುವುದನ್ನು ಇಚ್ಛಿಸುವ ಅನೇಕ ಜನರಿಂದಲೂ ಅವರ ದಿನನಿತ್ಯದ ಗೈರುಹಾಜರಿಯನ್ನು ಸ್ವಾಗತಿಸುವ ಅವರ ಸಂಗಾತಿಗಳಿಂದಲೂ, ವ್ಯಾಪಕ ಸ್ವಾಗತ ದೊರೆಯಲಾರದು. ಬ್ಯಾಂಕ್ ವ್ಯವಹಾರದಲ್ಲಿ ಸ್ವಯಂಚಲೀ ಯಂತ್ರಗಳನ್ನು ಅವಿರೋಧವಾಗಿ ಸ್ವೀಕರಿಸಿರುವುದು ಅನೇಕ ಸಂದೇಹವಾದಿಗಳಿಗೆ ಆಶ್ಚರ್ಯ ಉಂಟುಮಾಡಿರಬಹುದು. ಆದಾಗ್ಯೂ, ಹದಿನೈದು ವರ್ಷಗಳ ಅನಂತರವೂ ಉದರಿ ಕಾರ್ಡುಗಳಿಗೆ ಸ್ಥಾನ ಬಿಟ್ಟುಕೊಡಬೇಕಿದ್ದ ಚೆಕ್‌ಗಳ ಹಾಗೂ ನಗದಿನ ದೃಷ್ಟಿಯಲ್ಲಿ ಉದರಿ ಕಾರ್ಡುಗಳ ಬಳಕೆ ಕನಿಷ್ಠವಾಗಿದೆ.

ಮಾಹಿತಿ ತಂತ್ರವಿಜ್ಞಾನವನ್ನು ಅಭಿವೃದ್ಧಿಗೊಳಿಸುವಲ್ಲಿ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇತರ ನಿರ್ಬಂಧಗಳಿವೆ. ಇನ್ನೂ ಪರಿಹರಿಸಬೇಕಾಗಿರುವ ಕಾನೂನಿನ ಸಮಸ್ಯೆಗಳಿವೆ. ತಮ್ಮ ಉದ್ಯೋಗಕ್ಕೆ ಧಕ್ಕೆ ತರುವ ಅಪಾಯವಿರುವ ಯಾವುದೇ ಬದಲಾವಣೆಗಳಿಗೆ ಕೆಲಸಗಾರರ ತಪ್ಪಿಸಲಾಗದ ಪ್ರತಿರೋಧವಿರುತ್ತದೆ. ಹಿಂದಿನ ಕ್ರಾಂತಿಯ ಸಮಯದ ಲಡ್ಡೈಟುಗಳಿಗೆ (ಬದಲಾವಣೆಯ ವಿರೋಧಿಗಳು) ಒಂದು ಕೆಟ್ಟ ಹೆಸರು ಬಂದಿದೆ. ಆದರೆ ಅವರ ಪ್ರತಿಕ್ರಿಯೆಗಳು ಮಾನವೀಯ ಮತ್ತು ಅರ್ಥವಾಗುವಂತಹವಾಗಿದ್ದವು. ತಂತ್ರಜ್ಞಾನ ಉದ್ಯೋಗವನ್ನು ನಾಶಗೊಳಿಸುವಂತೆಯೇ ಸೃಷ್ಟಿಸಲೂ ಬಲ್ಲುದು. ಆದರೆ ಕಿಸೆ ಗುಣಕಗಳ ಇನ್ನೂ ದೊಡ್ಡ ಮಾರುಕಟ್ಟೆ ವಿಕಾಸಗೊಂಡಾಗ ಜಾರುಗುಣಕ ಪಟ್ಟಿಗಳ ತಯಾರಕ ವೈಯಕ್ತಿಕವಾಗಿ ಅದರ ಪ್ರಯೋಜನ ಪಡೆಯುವನೆಂದೇನೂ ಅಲ್ಲ. ಜತೆಗೆ ವೆಚ್ಚದ ಪ್ರಶ್ನೆಯೂ ಬರುತ್ತದೆ. ಬ್ಯಾಂಕಿಂಗಿನಲ್ಲಿ ಸಣ್ಣ ಬ್ಯಾಂಕುಗಳು 'ಮಾತಂ'ದ ಸಂಪೂರ್ಣ ಫಲಗಳ ಪ್ರಯೋಜನ ಪಡೆಯುವುದನ್ನು ತಡೆಯಬಹುದಾದ ಬಂಡವಾಳ ಹೂಡುವಿಕೆ ಹಾಗೂ ಶೀಘ್ರವಾಗಿ ತ್ಯಜಿಸಲಾಗದ ಸದ್ಯದ ಬೃಹದ್ಗಾತ್ರದ ಬಂಡವಾಳ ವಿನಿಯೋಜನೆ ಎರಡಕ್ಕೂ ಸಂಬಂಧಿಸಿದಂತೆ ಬ್ಯಾಂಕಿಂಗಿನಲ್ಲಿ ವೆಚ್ಚ ಖಂಡಿತವಾಗಿಯೂ ಒಂದು ನಿರ್ಬಂಧವಾಗಿದೆ. ಅಲ್ಲದೆ ಇತರ ಬ್ಯಾಂಕಿಂಗ್ ನಿರ್ಬಂಧಗಳೂ ಇವೆ. ಕೆಲವು ಕ್ಷೇತ್ರಗಳಲ್ಲಿ ಅಂತರ ಬ್ಯಾಂಕ್ ಸಹಕಾರಕ್ಕೆ ಇರುವ ಆವಶ್ಯಕತೆಯೂ ಇವುಗಳ ಪೈಕಿ ಒಂದು. ತೀವ್ರಅಭಿವೃದ್ಧಿಯ ಮೇಲೆ ಈ ಆವಶ್ಯಕತೆ ಎಷ್ಟು ಶಕ್ತವಾದ ತಡೆಯನ್ನು ಒಡ್ಡಬಲ್ಲದ್ದಾಗಿರಬಹುದೆಂಬುದನ್ನು ತೀರುವೆಮನೆ ಸ್ವಯಂಚಲ ಪಾವತಿ ವ್ಯವಸ್ಥೆಯ ಇತಿಹಾಸ ತೋರಿಸಿಕೊಟ್ಟಿದೆ. ಸಹಕಾರ ಅಗತ್ಯವಿಲ್ಲದಿದ್ದಾಗಲೂ, ದಕ್ಷತೆಯ ದೃಷ್ಟಿಯಿಂದ ಅದು ಅಪೇಕ್ಷಣೀಯವಾಗಬಹುದು ಮತ್ತು ಇಲ್ಲಿ ವಿಳಂಬವು ಸ್ಪರ್ಧಾತ್ಮಕತೆಯನ್ನು ದುರ್ಬಲಗೊಳಿಸುವ ಬುದ್ಧಿಪೂರ್ವಕ ಅನಿಚ್ಛೆಯ ಫಲ. ಹೆಚ್ಚುತ್ತಿದ್ದ ವಂಚನೆಗಳ ಎದುರಿನಲ್ಲಿ, ಅಂತಿಮವಾಗಿ ಸಹಕಾರದ ಉದ್ದೇಶದಿಂದ ಉದರಿ ಕಾರ್ಡುಗಳು ಬಂದುವು. ಏಕರೂಪದ ಸ್ವಯಂಚಲೀ ಷರಾಫ್ ಯಂತ್ರಗಳಿರಬೇಕೆಂದು ವ್ಯಾಖ್ಯಾನಕಾರರು ಸಾಕಷ್ಟು ಸಮಯದಿಂದ ನಮ್ಮ ಮೇಲೆ ಹಾಕುತ್ತಿರುವ ಒತ್ತಾಯದ ದಿಸೆಯಲ್ಲಿ ಮಿಡ್‌ಲೆಂಡ್ ಮತ್ತು ನ್ಯಾಷನಲ್ ವೆಸ್ಟ್ ಮಿನಿಸ್ಟರ್ ಬ್ಯಾಂಕುಗಳ ನಡುವಣ ಸ್ವಯಂಚಲೀ ಷರಾಫ್ ಯಂತ್ರಗಳ ಸಂಪರ್ಕ ವ್ಯವಸ್ಥೆ ಒಂದು ಮೊದಲ ನಡೆಯಾಗಿದೆ.

ಆದ್ದರಿಂದ, ಕ್ರಾಂತಿಯ ಮಾತು ಹೇಗಾದರೂ ಇರಲಿ, ಮುಂದೆ ಬರಲಿರುವ 'ಮಾತಂ' ವಿಚಾರವನ್ನು ಬಿಟ್ಟಾಗ್ಯೂ, ಪ್ರಚಲಿತ 'ಮಾತಂ'ದ ಪೂರ್ಣ ಪರಿಣಾಮಗಳು —ಅದರ ಬಗ್ಗೆ ಕೆಲವು ಹೆಚ್ಚು ಉತ್ಸಾಹಿ ಪ್ರಚಾರಕರು ಭವಿಷ್ಯ ನುಡಿದಿರುವಷ್ಟು ಶೀಘ್ರವಾಗಿ— ಕಂಡುಬರುವ ಸಂಭಾವ್ಯತೆ ಇಲ್ಲ. ಇವರ ಪೈಕಿ 'ಮಾತಂ' ಖಾತೆಯ ಮಂತ್ರಿಯೂ ಒಬ್ಬರು ಎಂಬುದನ್ನು ಅರ್ಥಮಾಡಿಕೊಳ್ಳಬಹುದು. ಕೇಬಲ್ ದೂರದರ್ಶನದ ಭವಿಷ್ಯದ ಬಗ್ಗೆ ಇವರ ದೃಷ್ಟಿ ಅತೀ ಆಶಾವಾದದ್ದೆಂದು ಅನೇಕರು ಭಾವಿಸಿದ್ದಾರೆ. ಆದರೆ, ಇದು ತೃಪ್ತಿಯ ಮನೋಧರ್ಮಕ್ಕೆ ಯಾವ ನೆವವೂ ಆಗದು. ಬದಲಾವಣೆ— ಮೂಲಭೂತ ಬದಲಾವಣೆ—ಅನಿವಾರ್ಯ. ಈ ಸಂದರ್ಭದಲ್ಲಿ ಒಂದು ಮಟ್ಟದಲ್ಲಿ ವಿಕ್ರಯ ಗಣಕ ವ್ಯವಸ್ಥೆಯೂ ಇನ್ನೊಂದು ಮಟ್ಟದಲ್ಲಿ ನಗದು ವ್ಯವಸ್ಥಾಪಕನ ಗಣಕ ವ್ಯವಸ್ಥೆಯೂ 1990ರ ದಶಕದ ವರೆಗೆ ಸಂಪೂರ್ಣವಾಗಿ ಜಾರಿಗೆಬಂದಿದ್ದಲ್ಲಿ, ಅವುಗಳ ಸವಾಲುಗಳನ್ನು ಎದುರಿಸಲು ನಮಗೆ ದೊರಕುವ ಅವಕಾಶವನ್ನು ನಾವು ಸ್ವಾಗತಿಸಬಹುದು.

ಇವು ಕಷ್ಟಸಾಧ್ಯವಾಗಬಹುದು. ಈಗಾಗಲೇ ಸ್ವಯಂಚಲೀ ಷರಾಫ್ ಯಂತ್ರಗಳು ಪರಿಚಿತವಾಗಿರುವ, ಜನಪ್ರಿಯವೆನ್ನಬಹುದಾದ, ಮಟ್ಟದಲ್ಲಿ ದೂರದರ್ಶನ ಕಾರ್ಯಕ್ರಮಗಳನ್ನು ನಾವು ನೋಡುತ್ತಿದ್ದೇವೆ. ಸಾಮಾನ್ಯವಾಗಿ ಆರಾಮಕುರ್ಚಿಯಿಂದಲೇ ಮಾಡಬಹುದಾದ ನಾಳಿನ ಸೇವೆಯಾಗಿ ಗೃಹ ಬ್ಯಾಂಕಿಂಗನ್ನು, ತಮ್ಮ ಆರಾಮ ಕುರ್ಚಿಗಳಿಂದಲೇ ಸರಕು ಖರೀದಿ ಮಾಡುವ ಬದಲು ಅಂಗಡಿಗಳಿಗೆ ಹೋಗಿ ವ್ಯಾಪಾರ ಮಾಡಬಯಸುವಷ್ಟು ಹುರುಪನ್ನು, ಇನ್ನೂ ಹೊಂದಿರುವ ಸಾರ್ವಜನಿಕರಿಗಾಗಿರುವ ವಿಕ್ರಯ ಗಣಕ ವ್ಯವಸ್ಥೆಯನ್ನು ಈ ಕಾರ್ಯಕ್ರಮಗಳಲ್ಲಿ ಪ್ರದರ್ಶಿಸಲಾಗುತ್ತಿದೆ. ಈ ಲೇಖನವನ್ನು ಬರೆಯುತ್ತಿದ್ದಾಗ ಮಿಲ್ಟನ್ ಕೇನ್ಸ್‌ನ ಮನೆಯೊಂದರ ಚಿತ್ರವನ್ನು ದೂರದರ್ಶನ ನೀಡಿತು. ಅದರಲ್ಲಿ ಇದುವರೆಗೆ ರೂಪಿಸಲಾದ 'ಮಾತಂ'ದ ಎಲ್ಲ ಅನುಕೂಲಗಳುಳ್ಳ ಗೃಹಕಚೇರಿಯನ್ನೊಳಗೊಂಡಂತೆ ಚಿತ್ರಿಸಿತ್ತು. ಅದರಿಂದ ಗೃಹ ಬ್ಯಾಂಕಿಂಗ್ ಒಂದು ಸಣ್ಣ ವಿಷಯವೆಂಬಂತೆ ಭಾಸವಾಯಿತು.

ಶಾಖೆಗಳ ವಹಿವಾಟುಗಳ ಒತ್ತಡವನ್ನು ಅವುಗಳ ಕೆಲಸದ ಒಂದು ಭಾಗವನ್ನು ದೂರ ಒಯ್ಯುವುದರ ಮೂಲಕ ನಮಗೂ ಅನುಕೂಲ

ವುಂಟಾಗುತ್ತದೆ. ವೈಯಕ್ತಿಕ ವಿಭಾಗದಲ್ಲಿ ನಗದು ವ್ಯವಸ್ಥಾಪನವನ್ನು ಒಂದು ಹೊಸ ಆಕರ್ಷಕ ಸೇವೆ ಎಂದು ಕಾಣುವ, ಮಾರುಕಟ್ಟೆ ವಲಯದ, ಸಣ್ಣದಾದರೂ ಮಹತ್ವದ್ದಾದ, ಅಗ್ರಭಾಗ ಒಂದು ಇದೆ. ವಿಕ್ರಯ ಗಣಕ ವ್ಯವಸ್ಥೆ ಬೇರೆಯೇ ಆದ ಒಂದು ವಿಷಯ. ಇದರಿಂದ ಖಾತೆಯಿಂದ ಖಾತೆಗೆ ನೇರವಾಗಿ ಚಲಿಸುವ ಕನಿಷ್ಠ ಶಿಲ್ಕುಗಳ ಮೇಲೆ ಸ್ಪಷ್ಟವಾಗಿಯೇ ಕುಗ್ಗಿಸುವ ಪರಿಣಾಮ ಉಂಟಾಗುತ್ತದೆ.

ವಿಕಾಸಗೊಳ್ಳುತ್ತಿರುವ ನಗದು ವ್ಯವಸ್ಥಾಪನ ಸೇವೆಗಳ ಹಾಗೂ ದಿನಾಂತ್ಯದ ನಗದು ಶಿಲ್ಕು ಹಣದ ಉಪಯುಕ್ತತೆಯ ಪ್ರಸ್ತುತ ಅರಿವನ್ನು ನಿಗಮ ಖಜಾಂಚಿಗಳಲ್ಲಿ ದೃಢಪಡಿಸುವ ಉದಿತೋದಿತ ಹಣಕಾಸು ಮಧ್ಯವರ್ತಿಗಳ ಆಗ ಮನದ ಅಪಾಯ ನಿಗಮ ವ್ಯವಹಾರ ಹಂತದಲ್ಲಿ ಇದೆ. ಇದು ಕನಿಷ್ಠ ಸಿಲ್ಕುಗಳ ಮೇಲೆ ಪರಿಣಾಮ ಬೀರುತ್ತದೆ(ಹಿಂದೆ ನಮ್ಮ ಅರಿವಿಗೆ ಬಹುಮಟ್ಟಿಗೆ ಬಾರದಿರುವ ಈ ಕ್ಷೇತ್ರದ ನಷ್ಟ ಸಂಭವಗಳನ್ನು ಕೂಡ 'ಮಾತಂ' ಪ್ರಕಟಗೊಳಿಸಬಲ್ಲದು). ಏತನ್ಮಧ್ಯದ ವಹಿವಾಟುಗಳು ನಮ್ಮನ್ನು ಬಹಿರಂಗವಾಗಿ ಇರಿಸುಮುರಿಸಿಗೆ ಒಳಗುಮಾಡಬಹುದು. ಅದೇ ಸಂದರ್ಭದಲ್ಲಿ ದಿನದ ಭಿನ್ನಾಂಶಕ್ಕೆ ಬಡ್ಡಿಯನ್ನು ವಿಧಿಸುವ ಆಯ್ಕೆಯ ಸ್ವಾತಂತ್ರ್ಯದೊಂದಿಗೆ ಅದರ ವೆಚ್ಚವನ್ನು ನಿರ್ಧಾರಣ ಮಾಡುವ ಅವಕಾಶವಿದ್ದಾಗ್ಯೂ ಈ ಇರಿಸುಮುರಿಸು ಉಂಟಾಗಬಹುದು. ಪ್ರತಿಯೊಂದು ತಂತ್ರವಿಜ್ಞಾನಾತ್ಮಕ ಮುನ್ನಡೆಯಿಂದ ದೊರಕುವ ಲಾಭಗಳಿಗೆ, ವಿಶೇಷವಾಗಿ ಬಹುರಾಷ್ಟ್ರೀಯ ಕಂಪನಿಗಳಿಗೆ ಸಂಬಂಧಿಸಿದಂತೆ, ಗಡಿಗಳಾಚೆಯ ಬಹುರಾಷ್ಟ್ರೀಯ ಬ್ಯಾಂಕ್ ವ್ಯವಹಾರದ ಪ್ರಯೋಜನಗಳ ಪರಿಚಯವನ್ನು ಆಗಲೇ ಹೊಂದಿರುವ ವೆಚ್ಚಗಳ ಬಗ್ಗೆ ಸದಾ ಕಣ್ಣು ತೆರೆದಿರುವ ಖಜಾಂಚಿಗಳೂ ಸೇರಿದಂತೆ ಬೃಹತ್ ನಿಗಮ ಗ್ರಾಹಕರು ಹೊಸ ಮಧ್ಯವರ್ತಿಗಳು ನೀಡಬಹುದಾದ ಯಾವುದೇ ಹೆಚ್ಚಿನ ನೆರವನ್ನು ಸ್ವೀಕರಿಸಲು ತಡಮಾಡುವುದಿಲ್ಲ. ಹೊಸ ತಂತ್ರವಿಜ್ಞಾನ ಅಂಥ ಮಧ್ಯವರ್ತಿಗಳ ಬಳಿಯೂ ಇರುತ್ತದೆ.ಅದನ್ನು ನಮ್ಮ ಸ್ವಂತಕ್ಕೆ ಬಳಸಲು ತಡೆಯುಂಟುಮಾಡಬಹುದಾದ ನಿರ್ಬಂಧಗಳಲ್ಲಿ ಕನಿಷ್ಠ ಕೆಲವಾದರೂ ಅಲ್ಲಿರವು.

ಈಗಾಗಲೆ ಅಸ್ತಿತ್ವದಲ್ಲಿರುವ ಮತ್ತು ಬಳಕೆಗೆ ಸಿದ್ಧವಾಗಿರುವ ಮಾಹಿತಿ ತಂತ್ರಜ್ಞಾನದ ಹರಹನ್ನು ಕುರಿತು ನಾವು ಆಲೋಚಿಸಿದಾಗ ಎರಡೂ ಮಟ್ಟದಲ್ಲಿಯೂ ಸಾಂಪ್ರದಾಯಿಕ ಬ್ಯಾಂಕಿಂಗ್ ಚರ್ವಿತಚರ್ವಣದ್ದಾಗಿದೆ ಎಂದು ನಾವು ಆಶ್ಚರ್ಯಪಡಬಹುದು. ನಮ್ಮ ಮೂಲಭೂತ ಸೇವೆಯಾದ ಹಣರವಾನೆ ಕೂಡ ನಷ್ಟ ಸಂಭವಕ್ಕೆ ಪಕ್ಕಾಗಿದೆ ಎಂಬುದನ್ನು ಒಪ್ಪಿಕೊಳ್ಳಲು ಕಷ್ಟವಾಗಬಹುದು. ಆದರೆ ನಿಧಿಗಳ ವಿದ್ಯುನ್ಮಾನ ವರ್ಗಾವಣೆಯಲ್ಲಿ ಈ ಅಭಿಪ್ರಾಯ ಅಂತಸ್ಥವಾಗಿದೆ. ತಾತ್ವಿಕವಾಗಿ ಇಂದಿನ ಎಲ್ಲಾ ಚೆಕ್ಕುಗಳ ಬದಲಿಗೆ ಅಂತರ್‌ಗೃಹ ಇತ್ಯರ್ಥಕಗಳ ನಡುವಣ ವರ್ಗಾವಣೆಗಳು ಬರಬಹುದು.

ಇದು ಪರಿಸ್ಥಿತಿಯ ಗಂಭೀರ ಚಿತ್ರ. ಬಹುಶಃ ಇದು ದೂರ ಭವಿಷ್ಯದ ಒಂದು ಚಿತ್ರ. ಆದರೆ ನಮ್ಮ ಕಾರ್ಯಕ್ಷೇತ್ರ ಹೆಚ್ಚು ಹೆಚ್ಚು ಕೊಚ್ಚಿಹೋಗುವುದೆಂಬ ಯೋಚನೆ ನಮಗೆ ಇಷ್ಟವಾಗದಿದ್ದರೆ ಪ್ರತಿಯಾದ ಕ್ರಮಗಳನ್ನು ಕೈಗೊಳ್ಳುವ ಸಾಧ್ಯತೆಗಳ ಬಗೆಗೆ ನಾವೀಗ ಉಪಯುಕ್ತ ಕಾರ್ಯದಲ್ಲಿ ನಿರತರಾಗಬಹುದು. ಹಾಗೆಂದರೆ ನಿಜಕ್ಕೂ ಇಂದಿನ ಪರಿಣತಿಯ ತಳಹದಿಯ ಮೇಲೆ ನಿರ್ಮಾಣಕಾರ್ಯ ಕೈಗೊಳ್ಳುವುದೇ ಆಗಿದೆ. ಆರಾಮಕುರ್ಚಿಗಳಿಂದ ತಮ್ಮ ಬ್ಯಾಂಕಿಂಗ್ ವ್ಯವಹಾರ ಮಾಡುತ್ತಿರುವ ನಮ್ಮ ವೈಯಕ್ತಿಕ ಗ್ರಾಹಕರು ತಮ್ಮ ಬ್ಯಾಂಕುಗಳು ನೀಡುವ ಸೇವೆಗಳಿಗಾಗಿ ಮುಂದೆಯೂ ಅವುಗಳತ್ತಲೇ ನೋಡುತ್ತಾರೆ. ಹೆಚ್ಚುತ್ತಿರುವ ಸ್ಪರ್ಧೆಯ ಫಲವಾದ ಸೇವೆಗಳಿಗಿಂತ ಆ ಸೇವೆಗಳು ಉತ್ತಮವಾಗಿರಬೇಕಷ್ಟೆ.

ಆದರೆ ಹೊಸತಂತ್ರಗಳು ನಮಗೆ ನೀಡುವ ಅವಕಾಶಗಳ ಪೂರ್ಣ ಪ್ರಯೋಜನ ಪಡೆದುಕೊಳ್ಳಲು ಸಹ ನಾವು ಸಿದ್ಧರಾಗಿರಬೇಕು. ನಮ್ಮ ಪ್ರಮುಖ ನಿಗಮ ಗ್ರಾಹಕರು ಸ್ವಸಹಾಯ ಬ್ಯಾಂಕಿಂಗಿನ ಪ್ರಯೋಗಮಾಡಿ ನೋಡುತ್ತಿರುವ ಬ್ಯಾಂಕಿಂಗ್ ಪಟಲದ ಇನ್ನೊಂದು ತುದಿಯಲ್ಲಿ ಸಾಲನೀಡಿಕೆಯ ಪರಿಣತಿಯನ್ನು ಹಾಗೂ ಉದರಿ ಮೂಲ್ಯಾಂಕನಗಳ ಅರಿವನ್ನು ನಾವು ಆಗಲೂ ಹೊಂದಿರಬೇಕು. ತತ್ಫಲವಾಗಿ ಸಾಲನೀಡಿಕೆ ಮತ್ತು ಅದರ ನಷ್ಟ ಸಂಭಾವ್ಯತೆಗಳನ್ನು ಅವರು ನಮಗೇ ಬಿಟ್ಟುಕೊಡುವಂತಾಗಬಹುದು. ಮತ್ತು ಪ್ರಮುಖ ನಿಗಮಗಳಿಗಿಂತ ವಿಶಾಲವಾದ ವ್ಯವಹಾರಪಟಲವೊಂದಕ್ಕೆ ಉಪಯುಕ್ತವೆನಿಸಬಹುದಾದ ಸೇವೆಗಳನ್ನು ಒದಗಿಸಲು ತಂತ್ರವಿಜ್ಞಾನ ನಮಗೆ ಸಾಮರ್ಥ್ಯ ನೀಡುತ್ತದೆ. ಇಂದಿನ ಯಥಾಸಾವಧಾನದ ಹಾಗೂ ದಸ್ತಾವೇಜುಗಳ ತೊಡರಿನಿಂದ ಕೂಡಿದ ವ್ಯವಸ್ಥೆಗಳ ಬದಲಿಗೆ ಬರುವ ವಿಶ್ವವ್ಯಾಪಿ ರಫ್ತು ಸೇವೆ ಇದಕ್ಕೊಂದು ಉದಾಹರಣೆ.

## ವೆಚ್ಚ ನಿರ್ಣಯಗಳು

ವೆಚ್ಚಗಳು ಆವಶ್ಯಕ ಆಯೋಜನೆಯ ಭಾಗವಾಗಿವೆ—ವೆಚ್ಚಗಳೆಂದರೆ ಇಲ್ಲಿ ಹಿಂದೆ ಪ್ರಸ್ತಾಪಿಸಲಾದ್ದಕ್ಕಿಂತ ಭಿನ್ನವಾದ ಅರ್ಥದಲ್ಲಿ ಪರಿಗಣಿಸಬೇಕು. 'ಮಾತಂ'ದ ಒಂದು ಪ್ರಚ್ಛನ್ನ ಅಪಾಯವೆಂದರೆ, ಹೊಸ ಸಾಧ್ಯತೆಗಳ ಬಗೆಗಿನ ಆಸಕ್ತಿ-ಸಂಭ್ರಮ ನಮ್ಮನ್ನು ಅದಕ್ಕೆ ತಗಲುವ ವೆಚ್ಚಗಳನ್ನು ಕುರಿತಂತೆ ಕುರುಡಾಗಿಸಬಲ್ಲುದು. ನಮ್ಮ ಚಟುವಟಿಕೆಗಳ ವೆಚ್ಚನಿರ್ಣಯ ಮಾಡುವುದರಲ್ಲಿ ನಾವು ಈ ಹಿಂದೆ ಗಮನಾರ್ಹ ಯಶಸ್ಸು ಗಳಿಸಿಲ್ಲ : ಚೆಕ್ಕಿನ ವೆಚ್ಚನಿರ್ಣಯ ಮಾಡುವುದಕ್ಕೆ ನಾವು ಬಹಳ ಕಾಲ ತೆಗೆದುಕೊಂಡೆವು ಮತ್ತು ಅಂತಿಮ ಫಲಿತಾಂಶ ಗಾಬರಿಗೊಳಿಸುವಂತಹುದಾಗಿತ್ತು. ನಾವು ಜಾಹೀರುಪಡಿಸುವ ಹಲವು ನೂರು ಸೇವೆಗಳ ಪೈಕಿ ಸರಿಯಾದ ವೆಚ್ಚನಿರ್ಣಯ ಮಾಡದಿರುವ ಎಷ್ಟೋ ಸೇವೆಗಳಿವೆ ಎಂದು ಕಾಣುತ್ತದೆ.

ನಮ್ಮ ಕನಿಷ್ಠ ಸಿಲ್ಕುಗಳು ನಿರಂತರವಾಗಿ ಮತ್ತು ಅಧಿಕಾಧಿಕವಾಗಿ ಕೊಚ್ಚಿಹೋಗುತ್ತಿರುವುದರಿಂದ ನಾವು ನೀಡುತ್ತಿರುವ ಸೇವೆಗಳನ್ನು ಗಂಭೀರವಾಗಿ ಗಮನಿಸುವುದು ವರ್ಷೇ ವರ್ಷೇ ಹೆಚ್ಚು ಹೆಚ್ಚು ಅಗತ್ಯವಾಗಹತ್ತಿದೆ. ಎಂದರೆ ಸೇವೆಗಳನ್ನು ಒಡೆಯಬೇಕು, ಅವುಗಳ ವೆಚ್ಚನಿರ್ಣಯ ಮಾಡಬೇಕು ಮತ್ತು ಅವಶ್ಯಶುಲ್ಕ ವಿಧಿಸಬೇಕು. ಹೊಸ ತಂತ್ರಗಳ ಕಡೆಗಿನ ನಮ್ಮ ನಡೆಯಿಂದಾಗಿ ನಮ್ಮ ವೆಚ್ಚನಿರ್ಣಯಗಳ ಪ್ರಕ್ರಿಯೆಗಳನ್ನು ಸುಧಾರಣೆಗೊಳಿಸುವುದರ ಜರೂರು ಹೆಚ್ಚಿದೆ. ಲಾಭರಹಿತವಾಗಿರುವುದೆಂದು ನಮಗೆ ಗೊತ್ತಿರುವ ಸೇವೆಯೊಂದನ್ನು ಜಾರಿಗೆ ತರಲು ನಾವು ಹಿಂದಿನಂತೆಯೇ ಮುಂದೆಯೂ ಆಗಾಗ್ಗೆ ಸ್ಪರ್ಧಾತ್ಮಕವಾಗಿ ಬದ್ಧವಾಗಿರುವೆವೆಂದು ನಮಗೆ ಅರಿವಾಗುತ್ತದೆ. ಚೆಕ್ಕು ಖಾತರಿ ಸೇವೆ ಅಗತ್ಯದ ಇತ್ತೀಚಿನ ಒಂದು ಉತ್ತಮ ಉದಾಹರಣೆ. ನಾವು ನಮ್ಮನ್ನು ಬದ್ಧಗೊಳಿಸುವುದಕ್ಕಿಂತ ಮೊದಲೇ, ಆಮೇಲೆ ಅಲ್ಲ, ಸಾಧ್ಯವಿದ್ದಷ್ಟು ನಿಖರವಾದ ಅಂಕಿ ಅಂಶಗಳನ್ನಾದರೂ ಕೊನೆಯ ಪಕ್ಷ ಹೊಂದಿರಬೇಕು. ಈ

ಪ್ರಕ್ರಿಯೆ ಕೆಲವೇಳೆ ನಾಯಕನನ್ನು ಅನುಸರಿಸುವ ಚಾಳಿಗೆ ಆರೋಗ್ಯಕರವಾದ ತಡೆಯನ್ನೊಡ್ಡುತ್ತದೆ. ನಾವು ಈ ಚಾಳಿಗೆ ಬೇಗ ಈಡಾಗುವೆಂದು ಕೆಲವರು ತಿಳಿಯುತ್ತಾರೆ. ಮತ್ತು ಈ ಚಾಳಿಯಿಂದಾಗಿ ಸ್ಪರ್ಧಿ ಬ್ಯಾಂಕುಗಳ ಸೇವೆಗಳನ್ನು ಪ್ರತ್ಯೇಕಿಸಿ ನೋಡುವ, ಈಗಾಗಲೆ ಕಠಿಣವಾದ, ಕೆಲಸ ಇನ್ನಷ್ಟು ಕಠಿಣವಾಗುತ್ತದೆ.

ಕನಿಷ್ಠ ಸಿಲ್ಕುಗಳು ಬದಲಾಗದೆ ಉಳಿದರೂ, ಸಿಬ್ಬಂದಿ ವೆಚ್ಚಗಳು ಏರುತ್ತಿರುವಾಗ ಬಡ್ಡಿದರಗಳು ಇಳಿಯುತ್ತಿವೆ ಎಂಬ ಸಂಗತಿಯಿಂದಾಗಿ ಸಿಬ್ಬಂದಿ ವೆಚ್ಚಗಳನ್ನು ನಿರ್ದಿಷ್ಟವಾಗಿ ಪರಿಶೀಲಿಸುವುದು ಅಗತ್ಯವೆನಿಸುತ್ತದೆ. ಲಾಭಕ್ಷೇತ್ರದಲ್ಲಿ ನಮ್ಮ ಸಾಧನೆ ಅತಿ ಭಯಾನಕವಾಗುವುದಾದರೆ, ಹಲವು ಕೈಗಾರಿಕೋದ್ಯಮಿಗಳು ದುಂದುಗಾರಿಕೆ ಎಂದು ಭಾವಿಸುವ ನಮ್ಮ ವ್ಯವಹಾರಜೀವನಮಾರ್ಗದ ವಿರುದ್ಧ ದಿಕ್ಕಿನಲ್ಲಿ ಮತ್ತಷ್ಟು ಮಿತವ್ಯಯವನ್ನು ಸಾಧಿಸುವತ್ತ ನಾವು ನೋಡಬೇಕಾಗಿದೆ ಎಂದು ವಾದಿಸಬಹುದಾಗಿದ್ದಾಗ್ಯೂ ಇಲ್ಲಿ ಉತ್ಪಾದಕತೆಯನ್ನು ಹೆಚ್ಚಿಸಲು 'ಮಾತಂ'ಗಿರುವ ಭಾವಸಾಮರ್ಥ್ಯ ನಮಗೆ ನೆರವಾಗಬೇಕು. ಅದು 'ಮಾತಂ' ಬಗೆಗಿನ ಚರ್ಚೆಯಲ್ಲಿ ನಿರ್ದಿಷ್ಟವಾಗಿ ಒಂದು ಭಾಗವಲ್ಲ.

ಕಾಣದಂತಾಗುತ್ತಿರುವ ಕನಿಷ್ಠ ಶಿಲ್ಕುಗಳ ಬದಲು ಶುಲ್ಕಗಳ ಕಡೆಗೆ ನಾವು ಚಲಿಸುವುದು ಅನಿವಾರ್ಯವಾಗುತ್ತದೆ. ಇದಕ್ಕೆ ಕೂಡ ಹೊಸ ಚಿಂತನೆ ಅಗತ್ಯವಾಗಿದ್ದಾಗ್ಯೂ ಆ ಬಗೆಗಿನ ಭಯಕ್ಕಿಂತ, ಈ ಬದಲಾವಣೆ ಹೆಚ್ಚು ಸುಲಭವೆನಿಸಬಹುದು. ವೆಚ್ಚನಿರ್ಣಯಕ್ಕಿಂತಲೂ ಕಡಿಮೆ ಪರಿಚಯದ ಪ್ರಕ್ರಿಯೆಯಾದ ಬೆಲೆನಿರ್ಣಯ ನಿರ್ಧಾರಕವೆಂಬುದು ಸ್ವತಃಸಿದ್ಧ. ನಷ್ಟಗಳ ಪೈಕಿ ಪ್ರಮುಖವಾದದ್ದೆಂದು ಅನ್ಯಥಾ ಒಪ್ಪಿಕೊಂಡಿರಬಹುದಾದ ಸೇವೆಯೊಂದನ್ನು ತ್ಯಜಿಸುವಲ್ಲಿ ಕೆಲವು ಸಂದರ್ಭಗಳಲ್ಲಿ ಬೆಲೆ ನಿರ್ಧಾರಣ ಒಂದು ನಿರ್ಣಾಯಕ ಅಂಶವಾಗಿರಬಹುದು. ಆದರೆ ಉಪಯುಕ್ತ ಸೇವೆಯೊಂದರ ಬೆಲೆ ಸರಿಯಾಗಿದ್ದರೆ ಅದನ್ನು ಗ್ರಾಹಕ ಒಪ್ಪುತ್ತಾನೆಂದು ನಾವು ನಂಬಬಹುದು.

ಬ್ಯಾಂಕಿಂಗ್ ಸ್ವರೂಪ ಬದಲಾವಣೆಯಾಗುತ್ತಿರುವುದರ ಬಗೆಗೆ ಗ್ರಾಹಕನ ಧೋರಣೆ ಏನು ? ಯಾವುದೇ ಅಮಿತೋತ್ಸಾಹವಿಲ್ಲದೆ ಒಪ್ಪಿಕೊಳ್ಳುವುದೇ ಈ ಧೋರಣೆ. ಇದು ಉದರಿ ಕಾರ್ಡುಗಳು ಮತ್ತು ಸ್ವಯಂ ಸರಾಫ್ ಯಂತ್ರಗಳನ್ನು ಕುರಿತ ಹಿಂದಿನ ಉಲ್ಲೇಖದಲ್ಲಿ ಪ್ರತಿಬಿಂಬಿತವಾಗಿದೆ. ನಮ್ಮ ಪ್ರಸ್ತುತ ಸೇವೆಗಳನ್ನು ಕುರಿತು ಕೆಲವು ಪತ್ರಿಕಾ ಟೀಕೆಗಳಲ್ಲಿ ಸೂಚಿತವಾಗಿರುವುದಕ್ಕಿಂತ ಹೆಚ್ಚು ವ್ಯಾಪಕವಾದ ತೃಪ್ತಿ ಗ್ರಾಹಕರಲ್ಲಿದೆ. ಮತ್ತು ಸಂಯುಕ್ತ ರಾಜ್ಯದಲ್ಲಿ (U. K.) ಬ್ಯಾಂಕಿಂಗ್ ಅಭಿವೃದ್ಧಿಶೀಲ ಉದ್ಯಮ ಎನ್ನುವುದು ನಮ್ಮ ಆಯೋಜನೆಯಲ್ಲಿ ಪ್ರಮುಖವಾದ ಅಂಶವಾಗಿದೆ. ಆದರೆ ನಮ್ಮ ಜೀವನೋಪಾಯಕ್ಕೆ ಸಾಕಷ್ಟು ಗಮನ ನೀಡದ ಮಟ್ಟಿಗೆ ನಾವು ಹೊಸತಂತ್ರಗಳ ಬಗ್ಗೆ ಉತ್ಸಾಹಿತರಾಗಬಹುದೆಂಬುದು 'ಮಾತಂ'ದ ಮುಸುಕಿನೊಳಗಿನ ಅಪಾಯಗಳ ಪೈಕಿ ಇನ್ನೊಂದು.

**ಹೊಸ ಸೇವೆಗಳು**

ಹೊಸ ಸೇವೆಗಳಿಗಾಗಿ ಒತ್ತಡವಿಲ್ಲದಿರುವಾಗ ಹೊಸ ತಂತ್ರವಿಜ್ಞಾನ ಹೆಚ್ಚು ಪರಿಚಿತವಾಗಿರುವ ಸಾಧ್ಯತೆಯೊಂದಿಗೆ ಇದು ಬದಲಾಗಬಹುದು. ಯಾವುದೇ ಸಂಸ್ಥೆಯಿಂದ ಹೊಸ ಸೇವೆಯೊಂದರ ಜಾರಿಯೊಂದಿಗೆ ಆ ನಿರ್ದಿಷ್ಟ ಸಾಧ್ಯತೆಯ ಬಗೆಗಿನ ಅರಿವು ಕೂಡಲೇ ಹೆಚ್ಚುವುದೆಂಬುದು ಸಹಜ. ಇಲ್ಲಿ ಪ್ರವೃತ್ತವಾಗಿರುವ ಪ್ರಕ್ರಿಯೆಗೆ ಉದರಿ ಕಾರ್ಡಿನ ಇತಿಹಾಸ ಉತ್ತಮ ಉದಾಹರಣೆಯಾಗಿದೆ. ನಷ್ಟಸಂಭವವುಳ್ಳ ಆದ್ಯಪ್ರವರ್ತನಕಾರ್ಯವನ್ನು ಮಾಡಲು ಇನ್ನೊಬ್ಬ ಪರಿಚಿತ ಆಂಗ್ಲಸ್ಪರ್ಧಿಗಾಗಿ ಕಾಯುವುದು ಈಗೇನೂ ಒಂದು ಪ್ರಶ್ನೆಯಲ್ಲ ಎಂಬುದನ್ನು ನಾವು ನೆನಪಿನಲ್ಲಿಟ್ಟಿರಬೇಕು. ನಮ್ಮ ಹೊಸ ಸ್ಪರ್ಧಿಗಳಿಂದ, ಅಮೆರಿಕನ್ ಬ್ಯಾಂಕುಗಳಿಂದ ಕೂಡ ಖಂಡಿತವಾಗಿ, ಅಲ್ಲದೆ ಹೊಸ ಹಣಕಾಸು ಮಧ್ಯವರ್ತಿಗಳಿಂದ ಕೂಡ ಬ್ಯಾಂಕಿಂಗ್ ನವೋನ್ಮೇಷಣೆಯನ್ನು ನಾವು ನಿರೀಕ್ಷಿಸಬಹುದು. ಲೀಸೆಸ್ಟರ್ ಬಿಲ್ಡಿಂಗ್ ಸೊಸೈಟಿ ಮತ್ತು ಸಿಟಿ ಬ್ಯಾಂಕ್‌ಗಳ ಸಹಯೋಗ ಭವಿಷ್ಯದಲ್ಲಿ ನಾವು ನಿರೀಕ್ಷಿಸಬಹುದಾದ ಸ್ಪರ್ಧೆಯ ಸ್ವರೂಪದ ಮುನ್ ರುಚಿಯಾಗಿದೆ. ನಮ್ಮ ಗ್ರಾಹಕರು ಈಗ ಎಷ್ಟೇ ತೃಪ್ತರೆಂದು ಕಾಣುತ್ತಿದ್ದರೂ ನಮಗೆ ಬಹು ದಿನಗಳಿಂದಲೂ ಹಿತಕರವಾಗಿ ಪರಿಚಯವಾಗಿರುವ ಗ್ರಾಹಕನಿಷ್ಠೆ ಅನಿರ್ದಿಷ್ಟವಾಗಿ ಮುಂದುವರಿಯುವುದೆಂದು ನಂಬುವುದು ಅವಿವೇಕವಾಗುತ್ತದೆ.

ಅಮೆರಿಕನ್ ಬ್ಯಾಂಕುಗಳು ನಮ್ಮ ನಡುವೆ ಈಗಾಗಲೇ ಇರದಿದ್ದರೂ ಬಹುತೇಕ ಸಾರ್ವಜನಿಕರಿಗೆ ತಾಂತ್ರಿಕ ನವೋನ್ಮೇಷಣೆ ಹೆಚ್ಚು ಪರಿಚಿತವಾಗಿರುವ, ಹಾಗೂ 'ವಾಹನಾರೂಢರಿಗಾಗಿ ಬ್ಯಾಂಕಿಂಗಿ'ನಿಂದ ಆರಂಭಿಸಿ ಉದರಿ ಕಾರ್ಡುಗಳ ವರೆಗೆ ಬ್ಯಾಂಕಿಂಗ್ ನವೋನ್ಮೇಷಣೆಯತ್ತ ಬ್ಯಾಂಕುಗಳು ಪಾರಂಪರಿಕವಾಗಿ ನಮ್ಮನ್ನು ಕೊಂಡೊಯ್ದಿರುವ, ಅಮೆರಿಕ ಸಂಸ್ಥಾನಗಳಲ್ಲಿಯ ಬ್ಯಾಂಕುಗಳ ಅನುಭವವನ್ನು ನಾವು ಉಪಯುಕ್ತವಾಗಿ ಅಧ್ಯಯನ ಮಾಡಬಹುದು.

'ಮಾತಂ' ಕ್ರಾಂತಿಯಲ್ಲಿ ನಾವು ನಿರೀಕ್ಷಿಸುತ್ತಿರುವ ಹಲವು ಆಘಾತಗಳನ್ನು ಅವು ಈಗಾಗಲೇ ಅನುಭವಿಸುತ್ತಿವೆ. ದಿನಾಂತ್ಯದ ಸಿಲ್ಕಿನ ವಿನಿಯೋಜನೆ ನಿರೀಕ್ಷಿತ ಸೇವೆಯೆಂಬುದು ಈಗಾಗಲೇ ಸ್ವೀಕೃತವಾಗಿರುವಾಗ ಸಾಂಪ್ರದಾಯಿಕ ಬ್ಯಾಂಕಿಂಗ್ ಬದಲಾವಣೆಗೊಳ್ಳದೆ ಇರಲಾರದು. ನಾವು ಮೇರಿಲ್‌ಲಿಂಚ್ಸ್‌ನ ಚಟುವಟಿಕೆಗಳ ಬಗ್ಗೆ ಬಹಳಷ್ಟು ಓದಿದ್ದೇವೆ. ಬ್ಯಾಂಕ್ ಆಫ್ ಅಮೆರಿಕಕ್ಕೆ ಅದರದೇ ಆದ ಉಪಗ್ರಹವೊಂದು ಇದೆ ಎಂಬ ಸಂಗತಿಯ ಬಗ್ಗೆ ನಾವು ಅಷ್ಟಾಗಿ ಕೇಳಿಲ್ಲ. ಅಮೆರಿಕನ್ ಅನುಭವದ ನಿಕಟಾವಲೋಕನದ ಬಹುಶಃ ಅತ್ಯಂತ ದಿಗಿಲುಗೊಳಿಸುವ ಮುಖವೆಂದರೆ, ನಮ್ಮದೇ ಆದ ಭವಿಷ್ಯವನ್ನು ಈಗಲೂ ಆರಾಮವಾಗಿ ಚರ್ಚಿಸುತ್ತಿದ್ದೇವೆ ಎಂಬುದು. 'ಮಾತಂ'ನ ಬ್ಯಾಂಕಿಂಗ್ ಪರಿಣಾಮಗಳು ನಾಳೆಯೇ ನಮಗೆಉಂಟಾಗದಿರಬಹುದು. ಆದರೆ ಅವು ಅಮೆರಿಕದಲ್ಲಿ ಬಹಳ ಕ್ಷಿಪ್ರವಾಗಿ ಬಂದುವು. ಅಮೆರಿಕನ್ ಬ್ಯಾಂಕಿಂಗಿನ ಛಿದ್ರ ಸ್ವರೂಪದಿಂದಾಗಿ ಆ ಬದಲಾವಣೆ ಬ್ರಿಟನ್ನಿನಲ್ಲಿ ಸಾಧ್ಯವಾಗಬಹುದಾದ್ದಕ್ಕಿಂತ ಹೆಚ್ಚು ಸುಲಭವಾದುದರಿಂದ ಭಾಗಶಃ ಆ ಬದಲಾವಣೆಗಳು ಅಮೆರಿಕದಲ್ಲಿ ಬೇಗ ಬಂದವು ಮತ್ತು ಅದಕ್ಷ ತೀರುವೆ ವ್ಯವಸ್ಥೆಯಿಂದಾಗಿ ನಿಧಿಗಳ ವಿದ್ಯುನ್ಮಾನ ವರ್ಗಾವಣೆ ಹೆಚ್ಚು ಬೇಗ ಅಲ್ಲಿ ಆಕರ್ಷಕವಾಯಿತು.

ಆದರೆ ಹೊಸ ತಂತ್ರಜ್ಞಾನದ ಅನುಭವಿಗಳಾದ ಅಮೆರಿಕನರು ನಮ್ಮ ಉನ್ನತ ಲಾಭದಾಯಕ ಬ್ಯಾಂಕಿಂಗಿನತ್ತ ಆಕರ್ಷಿತರಾಗಿ ಇಲ್ಲಿ, ಬ್ರಿಟನ್ನಿನಲ್ಲಿ, ಇದ್ದಾರೆ. ಕಾಲ ನಮ್ಮ ಪರವಾಗಿದೆಯೆಂದು ನಾವು ಖಂಡಿತವಾಗಿ ಭಾವಿಸಬಾರದು. ಆರಂಭದಿಂದ ಬದಲಾವಣೆಯನ್ನು ತರುವ ಸವಾಲನ್ನು ಎದುರಿಸಲು ಬಹಳ ಕಾಲವೇ ಬೇಕಾಗಬಹುದು.

ಅಮೆರಿಕವನ್ನು ಬಿಟ್ಟು ಇತರ ದೇಶಗಳಲ್ಲಿ ಏನಾಗುತ್ತಿದೆ ಎಂಬುದನ್ನು ನಾವು ಸಹಜವಾಗಿಯೇ ವೀಕ್ಷಿಸುತ್ತಿರಬೇಕು. ಇಂಥ ದೇಶಗಳಲ್ಲಿ ಜಪಾನ್ ಅಮುಖ್ಯವಲ್ಲ (ಅವರ ಮಕ್ಕಳ ಪೈಕಿ ಶೇ. 90ರಷ್ಟು ಮಂದಿ ಪ್ರೌಢಶಿಕ್ಷಣವನ್ನು ಮುಗಿಸುತ್ತಾರೆಂಬುದು ಅವರ ಯಶಸ್ಸಿನ

ಗುಟ್ಟುಗಳಲ್ಲಿ ಒಂದಾಗಿರಬಹುದು). ಗೃಹನಿರ್ಮಾಣ ಸಂಘಗಳು ಕೊಡುವ ಠೇವಣಿ ಪಾಸ್ ಪುಸ್ತಕಗಳನ್ನು ಬ್ರಿಟನಿನ ಜನ ಇಷ್ಟಪಡುವ ರೆಂಬುದು ನಮಗೆ ಗೊತ್ತು. ಆದರೆ, ನಾವು ಅವುಗಳನ್ನು ಕೊಡುವು ದಿಲ್ಲ. ಜಪಾನಿನಲ್ಲಿ ಬ್ಯಾಂಕುಗಳು ತಮ್ಮ ಪಾಸ್ ಪುಸ್ತಕಗಳನ್ನು ಯಾಂತ್ರೀಕರಿಸಿವೆ ಮತ್ತು ಅವು 'ಮಾತಂ'ನ ವಿಚಾರದಲ್ಲಿ ತಕ್ಕಮಟ್ಟಿಗೆ ಮುಂದಿವೆ, ನಿಜ. ಆದರೆ ಅದರಿಂದ ಸಿಬ್ಬಂದಿಯಲ್ಲೇನೂ ಉಳಿತಾಯ ವಾಗಿಲ್ಲ. ಅದರ ಆರ್ಥಿಕವೃತ್ತಾಂತ ಗಲಿಬಿಲಿಗೊಳಿಸುವಂಥದಾಗಿದೆ. ಆದರೆ, ಅದು ಅದಕ್ಷವೆಂದು ಅರ್ಥಶಾಸ್ತ್ರಜ್ಞ ಸೂಚಿಸಿದರೆ ಅದು ಧಾರ್ಷ್ಟ್ಯದ ಮಾತಾಗುತ್ತದೆ.

ತಂತ್ರವಿಜ್ಞಾನಾತ್ಮಕ ಅರಿವಿನಿಂದ ಕೂಡಿದ ಹಾಗೂ ಹೆಚ್ಚು ಹೆಚ್ಚು ವೈವಿಧ್ಯಮಯವಾದ ಸೇವಾ ಶ್ರೇಣಿಗಳನ್ನು ಬಿಕರಿ ಮಾಡಬಲ್ಲ ಬ್ಯಾಂಕರುಗಳನ್ನು ಅಪೇಕ್ಷಿಸುವ ಈ ವಿಕಸನಶೀಲ ಭವಿಷ್ಯದಲ್ಲಿ ತೊಡಗಿಕೊಂಡಿರುವಂಥ ಸಮಸ್ಯೆಗಳನ್ನು ಪರಿಹರಿಸಲು ನಾವು ಸಾಕಷ್ಟು ಸಜ್ಜುಗೊಂಡಿದ್ದೇವೆಯೇ ಎಂದು ಪ್ರಶ್ನಿಸಬೇಕಾಗಬಹುದು. (ಅವರು ಈಗಲೂ ತಮ್ಮನ್ನು ಬ್ಯಾಂಕರರೆಂದು ಭಾವಿಸಿಕೊಳ್ಳಬೇಕೇ ವಿನಾ ವಿಜ್ಞಾನಿಗಳೆಂದಲ್ಲ.) ನಮ್ಮಲ್ಲಿ ಹೆಚ್ಚು ವಯಸ್ಸಾದವರು ವ್ಯಾಪಾರದ ಬಗ್ಗೆ ಪಡೆದ ಅರಿವಿನ ಚೌಕಟ್ಟು ಮೂಲಭೂತ ಹಾಗೂ ನವೋನ್ಮೇಷ ಚಿಂತನೆಯನ್ನು ಉಂಟುಮಾಡುವಂತೆ ರೂಪಿತವಾಗಿರ ಲಿಲ್ಲ ಎಂಬುದನ್ನು ನಾವು ಮೊದಲಿಗೆ ಒಪ್ಪಿಕೊಳ್ಳಬೇಕು. ಉದರಿ ಕಾರ್ಡ್ ನಿಯಂತ್ರಕರು ತಮ್ಮವೇ ಆದ ಅಂಕಿ-ಅಂಶಗಳ ಆಧಾರದ ಮೇಲೆ ಯಾವ ಮಿತಿಗಳು ಸುರಕ್ಷಿತವೆಂದು ತಿಳಿದಿದ್ದಾರೊ ಸತತ ವಾಗಿ ಅವಕ್ಕಿಂತ ಕಡಿಮೆ ಮಟ್ಟದ ಉದರಿ ಮಿತಿಗಳನ್ನು ಶಾಖೆಗಳು ತಮ್ಮ ಕಾರ್ಡುದಾರರಿಗೆ ಆಪಾತತಃ ವಿಧಿಸುವ ತರಬೇತಿ ಪಡೆದ ಬ್ಯಾಂಕರನ ಸಾಂಪ್ರದಾಯಿಕ ಸ್ವಭಾವದ ಕುತೂಹಲಕಾರಿ ಪ್ರತಿಫಲ ಇದಾಗಿದೆ.

ಅದರ ಹಿನ್ನೆಲೆಯಲ್ಲಿ ಮಾಹಿತಿ ವಿಜ್ಞಾನದ ಮೊದಲ ಅಲೆಯನ್ನು ನಾವು ತಕ್ಕಮಟ್ಟಿಗೆ ಸಮರ್ಪಕವಾಗಿ ನಿರ್ವಹಿಸಿದ್ದೇವೆಂದು ಹೇಳಿ ಕೊಳ್ಳಬಹುದಾದ ಕಳೆದ 20 ವರ್ಷಗಳ ದಾಖಲೆಯನ್ನು ನಾವು ಮುಂದಿಡಬಹುದು. ಈ ಪ್ರಕ್ರಿಯೆಲ್ಲಿ ನಾವು ಸಶಸ್ತ್ರ ಬಲಗಳ ಸೇವೆ ಗಳನ್ನು ಬಿಟ್ಟರೆ ದತ್ತಾಂಶ ಪ್ರಕ್ರಮೀಕರಣದ ಅತಿ ದೊಡ್ಡ ಬಳಕೆ ದಾರರೆಂದೂ ಅದಕ್ಕೂ ಹಿಂದೆ ಹಲವಾರು ತಲೆಮಾರುಗಳ ಕಾಲ ಅದಕ್ಕಿಂತ ಹೆಚ್ಚು ಮೂಲಭೂತವಾದ ಬ್ಯಾಂಕಿಂಗಿನ ಬದಲಾವಣೆ ಗಳನ್ನು ಉಂಟುಮಾಡಿದ್ದೇವೆ ಎಂದೂ ಹೇಳಿಕೊಳ್ಳಬಹುದು.

ಆದರೆ ತರಬೇತಾದ ಬ್ಯಾಂಕರರು ಏನನ್ನೇ ಆದರೂ ಮಾಡಬಲ್ಲ ರೆಂಬ ಗತಕಾಲದ ಭರವಸೆಯಿಂದ ಇನ್ನು ಮುಂದೆ ನಾವು ಮಾತಾಡ ಲಾರೆವು ಎಂಬುದನ್ನು ಗಣಕಗಳ ಆಗಮನ ನಮ್ಮ ಅನುಭವಕ್ಕೆ ತಂದಿದೆ, ಮತ್ತು ಮುಂಬರುವ ವರ್ಷಗಳಲ್ಲಿ ಬ್ಯಾಂಕಿಂಗ್ ಅಲ್ಲದೆ ಇತರ ರಾಷ್ಟ್ರಗಳಲ್ಲಿ ತರಬೇತಾದ ಜನರ ಅಗತ್ಯ ನಮಗೆ ಇರುತ್ತದೆ ಎಂಬುದು ಖಚಿತವಾಗಿ ತೋರುತ್ತದೆ. ವಿಶೇಷಜ್ಞರ ಸಂಖ್ಯೆಯ ಹೆಚ್ಚಳದಿಂದ ಯಾವುದೇ ಹೊಸ ತೊಂದರೆಗಳು ಉದ್ಭವಿಸದಂತೆ ಖಾತರಿ ಮಾಡಿಕೊಳ್ಳಲು ಅಂತಹ ವಿಶೇಷಜ್ಞರನ್ನು ಸಮಗ್ರೀಕರಿಸು ವಲ್ಲಿ ನಮಗೆ ಈಗ ಸಾಕಷ್ಟು ಅನುಭವವಿದೆ. ತಂತ್ರವಿಜ್ಞಾನ ಬದಲಾ ದಂತೆ ಹಾಗೂ ವಿಕಾಸಗೊಂಡಂತೆ ಪ್ರಸಕ್ತ ಸಿಬ್ಬಂದಿ ಅದನ್ನು ಅರಿತು ಕೊಳ್ಳುವ ಅಗತ್ಯ ಇನ್ನೂ ಹೆಚ್ಚು ಕಠಿಣದ್ದಾಗಿರಬಹುದು. ತಂತ್ರ ವಿಜ್ಞಾನ ಪ್ರಧಾನವಾದ ತರಬೇತಿಯ ಕೊರತೆ ಈಗಲೂ ಇರುವುದು ವಿಷಾದದ ಸಂಗತಿ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹಾಗೂ ಹೊರಗಡೆ ತಂತ್ರವಿಜ್ಞಾನವೇ ತಿರುಳಾಗಿಲ್ಲದ ವ್ಯವಸ್ಥಾಪನ ವ್ಯಾಸಂಗಕ್ರಮ ಗಳ ಸಂಗತಿಗಳನ್ನು ಹೇಳಲಾಗುತ್ತಿದೆ. ಬ್ಯಾಂಕಿಂಗ್ ಪರೀಕ್ಷೆಗಳ ಮೌಲ್ಯವನ್ನು ಲಘುವಾಗಿ ಪರಿಗಣಿಸಿದ 1920ರ ದಶಕದ ವ್ಯವ ಸ್ಥಾಪಕರ ರೀತಿಯಲ್ಲಿ ಇಂದು ಹಲವು ಬ್ಯಾಂಕರರು ಒಳ್ಳೆಯ ಬ್ಯಾಂಕರನಿಗೆ ತಂತ್ರವಿಜ್ಞಾನದ ಅರಿವಿನ ಅಗತ್ಯವಿಲ್ಲವೆಂದು ನಂಬು ತ್ತಾರೆ. ನಮ್ಮಲ್ಲಿ ಇದೀಗ ಆರಂಭವಾಗುತ್ತಿರುವ ಸಮಸ್ಯೆಗಳನ್ನು ಬ್ಯಾಂಕುಗಳು ಎದುರಿಸಿದಂತೆಲ್ಲಾ ಅವು ಭಿನ್ನವಾದ ದೃಷ್ಟಿಯನ್ನೇ ತಳೆದಾವು.

ದೀರ್ಘಕಾಲದಲ್ಲಿ ಇದೆಲ್ಲವೂ ನಮ್ಮ ವೃತ್ತಿಸಂರಚನೆಯನ್ನು ಮಾರ್ಪಡಿಸಬಹುದು. ನಮಗೆ ಅಗತ್ಯವಾಗುವ ಯುವೋತ್ಸಾಹಿ ವಿಶೇಷಜ್ಞ ನಮ್ಮ ಶ್ರೇಣೀಕರಣ ಸಂರಚನೆಯ ಮೂಲಕ ಮೇಲೇರು ವಷ್ಟಕ್ಕೆ ಸಂತೃಪ್ತನಾಗಿರುವುದಿಲ್ಲ ಎಂಬುದನ್ನು ಗಣಕಗಳಲ್ಲಿ ಕಂಡಂತೆ ವೃತ್ತಿಪ್ರವೇಶದ ಘಟದಲ್ಲಿಯೂ ನಾವು ಮತ್ತೆ ಕಾಣುತ್ತೇವೆ. ನಮ್ಮ ಎಲ್ಲ ಹಿರಿಯ ಬ್ಯಾಂಕರರನ್ನು ಬ್ಯಾಂಕಿಂಗ್ ಸಿಬ್ಬಂದಿ ಶ್ರೇಣಿಯಿಂದಲೇ ನೇಮಿಸಿಕೊಳ್ಳುವ ಪರಿಕಲ್ಪನೆ ಈ ಹಿಂದೆ ಒಂದು ಶಕ್ತಿಯಾಗಿ ದ್ದಾಗ್ಯೂ ತಂತ್ರವಿಜ್ಞಾನದ ಬಗ್ಗೆ ಸಹಾನುಭೂತಿಯೂ ಅರಿವೂ ಹಿರಿಯ ವ್ಯವಸ್ಥಾಪಕ ವರ್ಗಕ್ಕೆ ಇಲ್ಲದ ಈ ಸಂದರ್ಭದಲ್ಲಿ ಇದೊಂದು ದೌರ್ಬಲ್ಯವಾಗಬಹುದು.

ಬ್ಯಾಂಕಿಂಗ್ ಒಂದು ಬೆಳೆಯುವ ಉದ್ಯಮವಾಗಿರುವವರೆಗೂ ಸಿಬ್ಬಂದಿ ಹೆಚ್ಚಳ ಸಮಸ್ಯೆಗಳನ್ನು ಸಂಪೂರ್ಣವಾಗಿಯಲ್ಲದಿದ್ದರೂ ಬಹಳಮಟ್ಟಿಗೆ ನಿವಾರಿಸಬಹುದು. ದುಡಿಮೆಯ ಉಳಿತಾಯದ ಸಾಧ್ಯತೆಗಳಿಗಿಂತ ಹೊಸ ಸೇವೆಗಳ ಅನ್ವೇಷಣೆ ರಾಷ್ಟ್ರಹಿತದ್ದಾಗಿರು ವಂತೆ ಬ್ಯಾಂಕಿಂಗ್ ಹಿತಕ್ಕೂ ಅನುಗುಣವಾಗಿರುತ್ತದೆ. ಅಂತೂ ಕಳೆದ ಎರಡು ಶತಮಾನಗಳಲ್ಲಿ ತಂತ್ರವೈಜ್ಞಾನಿಕ ಮುನ್ನಡೆಯಿಂದ ಆಗ ಬಹುದಾಗಿದ್ದ ದುಡಿಮೆಯ ವೇಳೆಯಲ್ಲಿನ ನಿರಂತರ ಇಳಿತಾಯ ವನ್ನು ತುಂಬಲಾಗಿದೆಯಾದರೂ ಹಿಂದಿನಂತೆ ಮುಂದೆಯೂ ಅದ ರಿಂದ ಬ್ಯಾಂಕಿಂಗಿನ ಮೇಲೆ ಪರಿಣಾಮವಾಗಲೇಬೇಕು. ಐದು ದಿನ ಗಳ ವಾರಾಂತ್ಯ ಸದ್ಯ ಭವಿಷ್ಯಕ್ಕಂತೂ ಅಲ್ಲ; ಆದರೂ ಅದು ಎಂದಾದರೂ ಬಂದೀತು. ಆದರೆ ನಾವು ಚರ್ಚಿಸುತ್ತಿರುವ ಸಂಭಾವ್ಯ ಬೆದರಿಕೆಗಳು ಒತ್ತಟ್ಟಿಗಿರಲಿ, ಬ್ಯಾಂಕಿಂಗಿನ ಅದೃಷ್ಟಕಾರಿ ಬೆಳವಣಿ ಗೆಯ ಭವಸಾಮರ್ಥ್ಯ ಮುಂದುವರಿಯುತ್ತಿರುವಾಗಲೂ, ಐಕ್ಯಕ ಬದಲಾವಣೆಗಳ ಬಗ್ಗೆ ಎಲ್ಲಾ ಉದ್ಯೋಗಿಗಳಿಗೆ ತಿಳುವಳಿಕೆ ನೀಡುತ್ತಿರ ಬೇಕು ಮತ್ತು ಭವಿಷ್ಯದ ಬಗ್ಗೆ ಯೋಜಿಸಬೇಕು ಎಂಬುದು ಮುಖ್ಯ. ಪರಿಚಿತವಾದ್ದಕ್ಕಿಂತಲೂ ಗೊತ್ತಿಲ್ಲದ್ದೇ ಹೆಚ್ಚು ದಿಗಿಲುಗೊಳಿಸು ವಂಥದಾಗಿದೆ ಮತ್ತು ಹೊಸ ತಂತ್ರವಿಜ್ಞಾನದ ಅವಕಾಶ ಹಾಗೂ ಸಾಧ್ಯ ಪರಿಣಾಮಗಳ ಬಗ್ಗೆ ವ್ಯಾಪಕ ಅಜ್ಞಾನ ಇನ್ನೂ ಇದೆ ಎಂಬುದು ಸ್ಪಷ್ಟ.

ಸ್ವಲ್ಪ ಮಟ್ಟಿಗೆ ಇದು ಕ್ಷೀಣಿಸುತ್ತಿರುವ ಸಮಸ್ಯೆ. ಈಗಾಗಲೇ ನಮ್ಮ ಯುವಸಹೋದ್ಯೋಗಿಗಳು ತಮ್ಮದೇ ಆದ ಜೀವನಶೈಲಿ ಯಿಂದ ಹಾಗೂ ಅನಂತರದ ಶಾಲಾವರ್ಷಗಳ ಅನುಭವದಿಂದ 'ಮಾತಂ'ದ ವಿವಿಧ ಮುಖಗಳ ಪರಿಚಯ ಉಳ್ಳವರಾಗಿದ್ದು ತಂತ್ರ ವಿಜ್ಞಾನದ ಅಂತಸ್ಥ ಭಾವನೆಯೊಂದನ್ನು ಹೊಂದಿದ್ದಾರೆ. ತಮ್ಮ ಹಿರಿಯರನ್ನು ಬೆಚ್ಚಿಸುವಂಥ ಬೆಳವಣಿಗೆಗಳನ್ನು ಒಪ್ಪಿಕೊಳ್ಳಲು ಸಂತೋಷಿಸುತ್ತಾರೆ. ಆದಾಗ್ಯೂ ಸಂವಹನ ಮೂಲಭೂತ ಪ್ರಾಮುಖ್ಯವುಳ್ಳದ್ದು. ಪ್ರತಿಯೊಂದು ನವೋನ್ಮೇಷಣೆಯನ್ನೂ,

(ಮುಂದಿನ ಪುಟಕ್ಕೆ)

# ವಿದೇಶದಲ್ಲಿ ಬ್ಯಾಂಕುಗಳ ಗ್ರಾಹಕ ಸೇವೆ

**ಹ. ಭಾ. ರವೀಂದ್ರ**

ಬ್ಯಾಂಕ್ ಒಂದು ಸೇವಾಸಂಸ್ಥೆ ಆಗಿರುವುದರಿಂದ, ಗ್ರಾಹಕನ ಅಗತ್ಯಗಳೇ ಬ್ಯಾಂಕು ಒದಗಿಸಬಲ್ಲ ಸೇವೆಗಳನ್ನು ನಿರ್ಧರಿಸುತ್ತವೆ. ಗ್ರಾಹಕರ ಅಗತ್ಯಗಳು, ಹಾಗೂ ಬ್ಯಾಂಕುಗಳು ಯಾವ ದರದಲ್ಲಿ ಅವನ್ನು ಪೂರೈಸಬಹುದು ಎಂದು ಎರಡು ವಿಷಯಗಳು ಯಾವಾಗಲೂ ಪ್ರತಿವರ್ತನಾತ್ಮಕವಾಗಿರುತ್ತವೆ. ಈ ಪ್ರಬಂಧದಲ್ಲಿ ಬ್ರಿಟನ್ನಿನಲ್ಲಿ ಬ್ಯಾಂಕುಗಳು ಸಲ್ಲಿಸುತ್ತಿರುವ ಮುಖ್ಯ ಸೇವೆಗಳನ್ನು ಭಾರತೀಯ ಬ್ಯಾಂಕುಗಳು ಸಲ್ಲಿಸುತ್ತಿರುವ ಸೇವೆಗಳೊಡನೆ ಹೋಲಿಸಿ ನೋಡಲು ನಾನು ಪ್ರಯತ್ನಿಸುತ್ತೇನೆ. ವಿದೇಶಗಳಲ್ಲಿನ ಬಹುತೇಕ ಸೇವೆಗಳು ಗುಣಾತ್ಮಕವಾಗಿರಲು ಹಾಗೂ ಉತ್ತಮವಾಗಿರಲು ಕಾರಣವೆಂದರೆ:

1 ಗ್ರಾಹಕರಿಗೆ ಬ್ಯಾಂಕುಗಳ ಬಗ್ಗೆ ಇರುವ ವ್ಯವಹಾರ ಜ್ಞಾನ,
2 ಯಾಂತ್ರೀಕರಣ ಹಾಗೂ ಮುಂದುವರಿದ ಸಂಪರ್ಕ ವ್ಯವಸ್ಥೆ,
3 ಸಾರ್ವಜನಿಕರಲ್ಲಿರುವ ಪ್ರಾಮಾಣಿಕತೆ ಹಾಗೂ ಶಿಸ್ತು.

ಬ್ರಿಟನ್ನಿನಲ್ಲಿ ಅಡಮಾನ ಮುಂಗಡಗಳನ್ನು ಮುಖ್ಯವಾಗಿ ತಮ್ಮ ವ್ಯವಹಾರವನ್ನಾಗಿಸಿಕೊಂಡಿರುವ ಕಟ್ಟಡ ನಿರ್ಮಾಣ ಸಹಕಾರ ಸಂಘಗಳು (Building Societies)ಠೇವಣಿಗಳನ್ನು ಸ್ವೀಕರಿಸಲು ಹಾಗೂ ಸಾಮಾನ್ಯ ವೈಯಕ್ತಿಕ ಬ್ಯಾಂಕಿಂಗ್ ಸೇವೆ ಸಲ್ಲಿಸಲು ಅನುಮತಿ ಪಡೆದಿವೆ. ಈ ಸಹಕಾರ ಸಂಘಗಳು ಠೇವಣಿ ಸಂಗ್ರಹಣೆಯ ಬ್ಯಾಂಕುಗಳೊಂದಿಗೆ ಸ್ಪರ್ಧಿಸುತ್ತವೆ. ಇತ್ತೀಚೆಗೆ ಇಂತಹ ಸ್ಪರ್ಧೆಯ ಫಲಿತಾಂಶವಾಗಿ ಬ್ಯಾಂಕುಗಳು ದುಬಾರಿ ಶುಲ್ಕ ಪಡೆದು ಸಲ್ಲಿಸುತ್ತಿದ್ದ ಸೇವೆಗಳನ್ನು ಉಚಿತವಾಗಿ ನೀಡಬೇಕಾಗಿ ಬಂದಿದೆ. ಉದಾಹರಣೆಗೆ ಗ್ರಾಹಕರು ತಮ್ಮ ವೈಯಕ್ತಿಕ ಚಾಲ್ತಿ ಖಾತೆಯ ಪ್ರತಿ ಖುಣಿಕೆಗೂ 20 ಪೆನ್ನಿಗಳನ್ನು ತೆರಬೇಕಾಗಿತ್ತು. ಈಗ ಈ ಶುಲ್ಕವನ್ನು ಮನ್ನಾ ಮಾಡಲಾಗಿದೆ.

ಹ. ಭಾ. ರವೀಂದ್ರ, ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು 560 001

ಸಾಂದರ್ಭಿಕವಾಗಿ ಒಂದು ವಾರದ ಮುನ್ಸೂಚನೆಯೊಡನೆ ಹಿಂದೆ ಪಡೆಯಬಹುದಾದ ಠೇವಣಿ ಖಾತೆಯ ಹಣವನ್ನು ಒಂದು ವಾರದ ಸೂಚನೆ ಇಲ್ಲದೆಯೇ ಪಾವತಿ ಮಾಡಲಾಗುತ್ತಿದ್ದರೂ, ತಪ್ಪು ದಂಡವಾಗಿ ಖುಣಿಕೆಯನ್ನು ಅನಾಗತ ದಿನಾಂಕದಂದಿನಂತೆ ಎಣಿಸಲಾಗುತ್ತದೆ. ಇಂತಹ ಖಾತೆಗಳಿಗೆ ಸಾಮಾನ್ಯವಾಗಿ ಬಡ್ಡಿ ನೀಡಲಾಗುತ್ತದೆ. ಇಲ್ಲಿ ವಿದೇಶದಲ್ಲಿ ಸಾಮಾನ್ಯವಾಗಿ ಉಪಯೋಗಿಸುವ ದಿನಾಂಕ ಮೌಲ್ಯದ(value date)ಪರಿಕಲ್ಪನೆಯ ಬಗೆಗೆ ಸ್ವಲ್ಪ ವಿವರಿಸುವುದು ಅವಶ್ಯಕ. ಯಾವುದೇ ಖಾತೆಗೆ ಹಿಂದಿನ ಅಥವಾ ಮುಂದಿನ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಮಾಡಬಲ್ಲ ಸೌಲಭ್ಯ. ಈ ಸೌಲಭ್ಯದೊಂದಿಗೆ ಬ್ಯಾಂಕು ವಿಧಿಸುವ/ನೀಡುವ ಬಡ್ಡಿಯೂ ದಿನಾಂಕ ಮೌಲ್ಯದ ದಿನದಿಂದ ಲೆಕ್ಕಿಸಲ್ಪಡುತ್ತದೆ.

**ವಿದೇಶದಲ್ಲಿ ಬ್ಯಾಂಕುಗಳು ಗ್ರಾಹಕರಿಗೆ ಒದಗಿಸುವ ಸೇವೆಯ ವಿವಿಧ ಬಗೆಗಳು**

1 ಸಾಮಾನ್ಯ ಚಾಲ್ತಿ/ಠೇವಣಿ ಖಾತೆಗಳನ್ನು ತೆರೆಯುವುದು,
2 ತಗಾದೆ ಡ್ರಾಫ್ಟು/ತಂತಿ ವರ್ಗಾವಣೆ ರವಾನೆಗಳು,
3 ಉಧರಿ ಖಾತರಿ ಪತ್ರಗಳ ಅಡಿಯಲ್ಲಿ ದಸ್ತಾವೇಜುಗಳನ್ನು ಪರಕ್ರಾಮಿಸುವುದು,
4 ಹುಂಡಿಗಳನ್ನು ವಸೂಲು ಮಾಡುವುದು, ಖಾತರಿಗಳನ್ನು ನೀಡುವುದು ಹಾಗೂ ಉದರಿ ಖಾತರಿ ಪತ್ರಗಳನ್ನು ತೆರೆಯುವುದು,
5 ವಿದೇಶಿ ಹಣದ ಕೊಳ್ಳುವಿಕೆ/ಮಾರುವಿಕೆ,
6 ಸಾಲಗಳು—ಸಾಂಘೀಕರಣ ಹಾಗೂ ಸಾಂಘೀಕೃತ ಸಾಲಗಳಲ್ಲಿ ಭಾಗವಹಿಸುವುದು ಹುಂಡಿ ಹಾಗೂ ಬಿಲ್ಲುಗಳನ್ನು ವಟಾಯಿಸುವುದು,
7 ಉದರಿ ಕಾರ್ಡುಗಳ ನೀಡಿಕೆ.

ಈ ಸೇವೆಗಳ ಬಗ್ಗೆ ಚರ್ಚೆ ನಡೆಸುವುದರ ಮುನ್ನ ಮಾರುಕಟ್ಟೆ ಬಲಗಳು ಹೇಗೆ ಪ್ರತಿಸ್ಪಂದಿಸುತ್ತವೆ ಎಂಬುದರ ಸಾಧಾರಣ ಚಿತ್ರ ನೀಡುವುದು ಸುಸಂಗತವೆನಿಸುತ್ತದೆ. ತನ್ನ ದೇಶದಲ್ಲಿ ಅಥವಾ ಅನ್ಯ

(ಹಿಂದಿನ ಪುಟದಿಂದ)

ಅದು ತಂತ್ರವೈಜ್ಞಾನಿಕ ಪ್ರಗತಿಯ ಫಲವಾಗಿರಲಿ ಇಲ್ಲದಿರಲಿ, ಅದಕ್ಕೆ ಸಂಬಂಧಿಸಿದ ಪ್ರತಿಯೊಬ್ಬರೂ ಅದರ ಉದ್ದೇಶವನ್ನು ಅರಿತುಕೊಂಡರೆ ಹೆಚ್ಚು ಸುಲಭವಾಗಿ ಅದನ್ನು ಜಾರಿಗೆ ತರಬಹುದು. ಅದೂರ ಭವಿಷ್ಯದಲ್ಲಿ ನಮಗೆ ಅಗತ್ಯವಾಗುವ ಜನರನ್ನು ಬಹುತೇಕ ಒದಗಿಸಬಹುದಾದ ಬ್ಯಾಂಕುಗಳ ಆ ಸಿಬ್ಬಂದಿ ವರ್ಗಗಳಲ್ಲಿ ತಂತ್ರವೈಜ್ಞಾನಿಕ ಮಾಹಿತಿ ಮತ್ತು ತರಬೇತಿಯ ಬಗ್ಗೆ ಸಾಕಷ್ಟು ಅಪೇಕ್ಷೆ ಇದೆ.

ಈ ಸಂದರ್ಭದಲ್ಲಿ ಉದ್ಯೋಗಿಗಳ ಸಂಘಗಳ ಪ್ರಾಮುಖ್ಯ ಸ್ಪಷ್ಟ. ಕನಿಷ್ಠ ಪಕ್ಷ ಇದರಷ್ಟೆ ಮುಖ್ಯವಾದ್ದೆಂದರೆ ಸಂವಹನ ಪ್ರಕ್ರಿಯೆಯ ಮಹತ್ವದ ವ್ಯಕ್ತಿಗಳಾದ ಶಾಖಾ-ವ್ಯವಸ್ಥಾಪಕರಿಗೆ ಸಂಪೂರ್ಣವಾಗಿ ಹಾಗೂ ಸತತವಾಗಿ ಮಾಹಿತಿಯನ್ನು ನೀಡುತ್ತಿರಬೇಕು ಮತ್ತು ವ್ಯವಸ್ಥಾಪನೆ ಹಾಗೂ ಸಿಬ್ಬಂದಿ, ಇವೆರಡೂ ಕ್ಷೇತ್ರಗಳ ಸದಸ್ಯರಾಗಿ ಅವರು ನಿರ್ವಹಿಸಬೇಕಾದ ಕಠಿಣ ಕಾರ್ಯಭಾರದಲ್ಲಿ ಬೆಂಬಲ ನೀಡಬೇಕು.

ಮಾಹಿತಿ ತಂತ್ರವಿಜ್ಞಾನ ಒಂದು ಕ್ರಾಂತಿಯೇ ಆಗಿರಲಿ, ಅದ್ಭುತ ವಿಕಸನಶೀಲ ಬೆಳವಣಿಗೆಯೇ ಆಗಿರಲಿ, ಅದು ಈಗಾಗಲೇ ಕೆಲಕಾಲದಿಂದ ನಮ್ಮ ಜೀವನಗಳನ್ನು ಬದಲಾಯಿಸುತ್ತಿದೆ. ಇತರ ಹಲವರಿಗಿರುವಂತೆ ಬ್ಯಾಂಕರರಿಗೂ ಮಾಹಿತಿ ತಂತ್ರವಿಜ್ಞಾನ ಅವಕಾಶಗಳನ್ನೂ ನೀಡಿದೆ, ಸವಾಲುಗಳನ್ನೂ ಒಡ್ಡಿದೆ. ತಂತ್ರವಿಜ್ಞಾನಿಗಳ ಉತ್ಸಾಹದೊಂದಿಗೆ ಬ್ಯಾಂಕರರ ಜಾಗರೂಕತೆಯ ಸಂತುಲಿತ ಸಂಯೋಜನೆ ಭವಿಷ್ಯಕ್ಕೆ ಒಂದು ಉತ್ತಮ ಮಿಶ್ರಣವಾಗಬಹುದು.



ದೇಶಗಳಲ್ಲಿ ಉತ್ಪಾದಿತವಾದ ಅನೇಕ ಸರಕುಗಳ ವಹಿವಾಟು ಲಂಡನ್ ಮಾರುಕಟ್ಟೆಯಲ್ಲೇ ನಡೆಯುತ್ತದೆ. ಉದಾಹರಣೆಗೆ ಬ್ರಜಿಲ್, ಕ್ಯೂಬಾ, ಭಾರತದ ಕಾಫಿ ಹಾಗೂ ಸಕ್ಕರೆ, ಕೆನಡದಲ್ಲಿ ತೆಗೆದ ತೈಲ, ಆಫ್ರಿಕದ ಮೆಣಸು, ಏಲಕ್ಕಿ ಮುಂತಾದವುಗಳ ಬೆಲೆ ಲಂಡನ್ ಮಾರುಕಟ್ಟೆಯಲ್ಲಿ ನಿಗದಿಯಾಗುತ್ತದೆ. ಬೇಡಿಕೆ ಹಾಗೂ ಪೂರೈಕೆಗೆ ಅನುಗುಣವಾಗಿ ದಿನದಿಂದ ದಿನಕ್ಕೆ ಏಕೆ, ಗಂಟೆಯಿಂದ ಗಂಟೆಗೆ ಏರಿಳಿತಗಳಿರುತ್ತವೆ. ಲಂಡನ್ನಿನಲ್ಲಿ ಎಲ್ಲ ತೆರನ ಪದಾರ್ಥಗಳಿಗೆ ಹಾಗೂ ಸೇವೆಗಳಿಗೆ ಮುಕ್ತಮಾರುಕಟ್ಟೆ ಇದೆ. ಇದಕ್ಕೆ ಬ್ಯಾಂಕಿಂಗ್ ಸೇವೆಯೂ ಹೊರತಲ್ಲ.

ಗ್ರಾಹಕರು ತಾವು ಪಡೆದ ಮುಂಗಡಗಳಿಗೆ, ತಾವು ಇಟ್ಟ ಠೇವಣಿಗಳಿಗೆ ಅಥವಾ ಪಡೆದ ಉದರಿ ಖಾತರಿ ಪತ್ರಗಳಿಗೆ ಅತ್ಯಂತ ಲಾಭದಾಯಕ ದರವನ್ನು,ದಕ್ಷ ಹಾಗೂ ತ್ವರಿತ ಸೇವೆ ನೀಡುವ ಬ್ಯಾಂಕನ್ನು ಅರಸುತ್ತಾರೆ. ವಿಶೇಷವಾಗಿ ಮೊಬಲಗು ಹೆಚ್ಚಿದಷ್ಟೂ ಅವಿರತವಾಗಿ ಏರಿಳಿತಗಳುಳ್ಳ ಮಾರುಕಟ್ಟೆಗಳು ಬ್ಯಾಂಕುಗಳು ದೀರ್ಘಾವಧಿ ಠೇವಣಿಗಳನ್ನು ಸ್ವೀಕರಿಸಲಾರದಂತೆ ಮಾಡುತ್ತವೆ. ಆದುದರಿಂದ ಸಾಮಾನ್ಯವಾಗಿ ಸಾವಧಿ ಠೇವಣಿಗಳು ಗರಿಷ್ಠ ಆರು ತಿಂಗಳ ಅವಧಿಗೆ ಮಾತ್ರ ಸ್ವೀಕರಿಸಲ್ಪಡುತ್ತವೆ. ಹೀಗಿದ್ದಾಗೂ ಬ್ಯಾಂಕುಗಳು ಸ್ಪರ್ಧೆಯಲ್ಲಿರಲು ಮುಂದಿನ ಅಂಶಗಳು ಕಾರಣವಾಗಿವೆ :

1 ಆಧುನಿಕ ಸಂಪರ್ಕ ಜಾಲಗಳು,
2 ಮಾಮೂಲಿ ಸೇವೆಗಳ ಯಾಂತ್ರೀಕರಣ,
3 ಭಾರತೀಯ ಬ್ಯಾಂಕ್ ವ್ಯವಸ್ಥೆಗೆ ಹೋಲಿಸಿದರೆ ಶಾಖಾ ವ್ಯವಸ್ಥಾಪಕರಿಗೆ ಇರುವ ಹೆಚ್ಚಿನ ವಿವೇಚನಾಧಿಕಾರ,
4 ಅತ್ಯಂತ ಕಡಿಮೆ ಹಾಗೂ ಸರಳ ನಿಯಮಗಳು ಹಾಗೂ ಸರಳ ವಿಧಾನಗಳಿಂದಾಗಿ ಅತ್ಯಂತ ಕಡಿಮೆ ಕಾಗದಪತ್ರಗಳ ಸೃಷ್ಟಿ. (ಹಲವು ವೇಳೆ ದೂರವಾಣಿಯ ಮೂಲಕವೇ ವ್ಯವಹಾರಗಳು ಇತ್ಯರ್ಥವಾಗುತ್ತವೆ)
5 ಗ್ರಾಹಕರ ಪ್ರಾಮಾಣಿಕತೆ, ಶಿಸ್ತು ಹಾಗೂ ಬ್ಯಾಂಕಿಂಗ್ ಬಗ್ಗೆ ತಿಳಿವಳಿಕೆ.

### ಚಾಲ್ತಿ ಮತ್ತು ಠೇವಣಿ ಖಾತೆಗಳು

ವ್ಯಕ್ತಿ, ಕಂಪನಿ ಹಾಗೂ ಸಂಸ್ಥೆಗಳು ಚಾಲ್ತಿ ಖಾತೆಗಳನ್ನು ತೆರೆಯಬಹುದು. ಚಾಲ್ತಿ ಖಾತೆಗಳಿಗೆ ಮಾತ್ರ ಚೆಕ್ಕುಗಳನ್ನು ನೀಡಲಾಗುತ್ತದೆ. ಬಡ್ಡಿ ತರುವ ಠೇವಣಿಗಳಲ್ಲಿ ಹಣ ತೊಡಗಿಸಿಯೂ ಹಲವು ದಿನಗಳ ಮುನ್ಸೂಚನೆ ನೀಡಿ ತಮ್ಮ ಹಣ ಹಿಂಪಡೆವ ಹಕ್ಕನ್ನು ಉಳಿಸಿಕೊಳ್ಳಬಯಸುವವರಿಗಾಗಿ ಏಳು ದಿನಗಳ ಮುನ್ಸೂಚನೆ ಖಾತೆಗಳು ಅಥವಾ ಕರೆ ಠೇವಣಿ ಖಾತೆಗಳನ್ನು ತೆರೆಯಲಾಗುವುದು. ಈ ಖಾತೆಗಳನ್ನು ಮಿತಿಹಿಂಪಡೆತ ಸೌಲಭ್ಯವುಳ್ಳ ಉಳಿತಾಯ ಖಾತೆಗೆ ಹೋಲಿಸಬಹುದಾದರೂ ಈ ಖಾತೆದಾರರಿಗೆ ಚೆಕ್ ಸೌಲಭ್ಯ ದೊರೆಯುವುದಿಲ್ಲ.

ಕಂಪ್ಯೂಟರುಗಳ ಮೂಲಕ ಕೇಂದ್ರೀಕೃತ ಲೆಕ್ಕ ಪದ್ಧತಿಯನ್ನು ಅನುಸರಿಸಲಾಗುತ್ತಿದೆಯಾದ್ದರಿಂದ ಖಾತೆದಾರರಿಗೆ ಸಲ್ಲಿಸುವ ಸೇವೆ ಅತ್ಯುತ್ತಮವಾಗಿರುತ್ತದೆ. ಖಾತೆದಾರನ ಮಾದರಿ ಸಹಿಯನ್ನು ಹೊಂದಿದ ಗುರುತಿನ ಕಾರ್ಡ್ ಅಥವಾ ಚೆಕ್ ಕಾರ್ಡ್ ನೀಡಲಾಗುವುದು. ಇದರಿಂದ ಖಾತೆದಾರ ನಿರ್ದಿಷ್ಟಪಡಿಸಿದ ಮಿತಿಯೊಳಗೆ, ಉದಾಹರಣೆಗೆ £50 ಅಥವಾ £100 ವರೆಗಿನ ತನ್ನ ಖಾತೆಯ ಮೇಲಿನ ಚೆಕ್ಕನ್ನು ಬ್ಯಾಂಕಿನ ಯಾವುದೇ ಶಾಖೆಯಲ್ಲಿ ಸಲ್ಲಿಸಿ ಹಣ ಪಡೆಯಲು ಸಹಾಯಕವಾಗುತ್ತದೆ. ಗ್ರಾಹಕರಿಗೆ ವೈಯಕ್ತಿಕ ಗುರುತಿನ ಸಂಕೇತ ಸಂಖ್ಯೆಗಳನ್ನು ನೀಡಲಾಗಿರುತ್ತದೆ. ಈ ಸಂಖ್ಯೆಯನ್ನು ಚೆಕ್ ಕಾರ್ಡ್ ಉಪಯೋಗಿಸಿ ಹಣ ನೀಡುವ ಯಂತ್ರದ ಮೂಲಕ, ಬ್ಯಾಂಕಿನೊಳಗೆ ಪ್ರವೇಶಿಸದೆಯೇ ಒಂದು ಮಿತಿಯೊಳಗೆ ಹಣವನ್ನು ದಿನದ ಯಾವ ವೇಳೆಯಲ್ಲಾದರೂ ಪಡೆಯಬಹುದು. ಈ ಬ್ಯಾಂಕುಗಳು ದಿನದಲ್ಲಿ ಬೆಳಗಿನ 9.30ರಿಂದ ಮಧ್ಯಾಹ್ನ 3.00ರ ವರೆಗೆ ವಾರದಲ್ಲಿ ಐದು ದಿನಗಳು ಮಾತ್ರ ತೆರೆದಿದ್ದರೂ ಈ ಯಂತ್ರಗಳು ವಾರದ ಎಲ್ಲ ದಿನಗಳಲ್ಲೂ ದಿನದ 24 ಗಂಟೆಗಳೂ ಕಾರ್ಯಪ್ರವೃತ್ತವಾಗಿರುತ್ತವೆ.

ಈ ಯಂತ್ರಗಳು ಗಣಕೀಕೃತ ಸ್ವಯಂಶಿಕ್ಷಕ ಯಂತ್ರಗಳಾಗಿದ್ದು, ಎಲ್ಲ ಪ್ರಮುಖ ಸ್ಥಳಗಳಲ್ಲಿಯೂ ಸ್ಥಾಪಿಸಲ್ಪಟ್ಟಿರುತ್ತವೆ. ಈ ಯಂತ್ರಗಳು ತಪ್ಪುಗಳನ್ನೆಸಗಿದಾಗ ಬೇರೆ ಖಾತೆಗಳನ್ನು ಖುಣಿಸಬಹುದು. ಇದನ್ನು ತಪ್ಪಿಸಲು ಇತ್ತೀಚೆಗೆ ಅಮೆರಿಕದಲ್ಲಿ ಖಾತೆದಾರರು ನಡೆಸಿದ ಕೊನೆಯ ಹತ್ತಿಪ್ಪತ್ತು ವಹಿವಾಟುಗಳನ್ನು ದಾಖಲಿಸಿಕೊಳ್ಳುವ ಮೈಕ್ರೋಚಿಪ್ (Microchip) ಹೊಂದಿರುವ ಚೆಕ್ ಕಾರ್ಡ್‌ಗಳನ್ನು ರೂಪಿಸಲಾಗಿದೆ. ಈ ದಾಖಲೆಗಳು ಖುಣಿಕೆ ವಹಿವಾಟು ನಿಜವಾಗಿ ನಡೆಯಿತು ಎಂಬುದಕ್ಕೆ ಪುರಾವೆಯಾಗುತ್ತವೆ.

ವ್ಯವಹಾರವನ್ನು ಗಣಕೀಕರಿಸಿರುವುದರಿಂದ ಖಾತೆಗಳ ತಃಖ್ತೆಯನ್ನು ಕಾಲಕ್ಕೆ ಸರಿಯಾಗಿ ತಯಾರಿಸುವುದಕ್ಕೆ ಸಹಾಯಕವಾಗಿದೆ. ತಃಖ್ತೆಗಳನ್ನು ಅಂದಂದೇ ರವಾನಿಸಲಾಗುವುದು. ನಗದು ವಹಿವಾಟುಗಳು ಕಡಿಮೆ. ಅದನ್ನು ಸಾಮಾನ್ಯವಾಗಿ ಉತ್ತೇಜಿಸುವುದಿಲ್ಲ. ಖಾತೆಗೆ £10,000 ಗಿಂತ ಹೆಚ್ಚಿಗೆ ನಗದು ಹಣ ಕಟ್ಟಿದರೆ ಅದಕ್ಕೆ ವಿಶೇಷ ಶುಲ್ಕ ತೆರಬೇಕಾಗುತ್ತದೆ. ಏಕೆಂದರೆ, ಪ್ರತಿ ಬ್ಯಾಂಕು ತಾನು ಪ್ರಮುಖ ಠೀರುವೆ ಬ್ಯಾಂಕುಗಳಿಗೆ ನಗದನ್ನು ರವಾನಿಸುವುದಕ್ಕೆ ನಗದು ನಿರ್ವಹಣ ಶುಲ್ಕವನ್ನು ನೀಡಬೇಕಾಗಿರುತ್ತದೆ. ಈ ನಗದನ್ನು ಎಣಿಸಲು ಯಂತ್ರಗಳನ್ನು ಬಳಸಿದರೂ ಹಣವನ್ನು ರಕ್ಷಿಸುವ ವೆಚ್ಚ ಬಹಳ ಹೆಚ್ಚು. ಸಾಮಾನ್ಯವಾಗಿ ಎಲ್ಲ ಚೆಕ್ಕುಗಳ, ಪ್ರವಾಸಿ ಚೆಕ್ಕುಗಳ ಉದರಿ ಕಾರ್ಡುಗಳಿಂದ ನಗದು ಪಾವತಿಗಳು, ಖಾತೆಗೆ ನಗದು ಅಥವಾ ಚೆಕ್ಕುಗಳ ಜಮೆ ಮುಂತಾದುವುಗಳನ್ನು ಟೆಲ್ಲರ್ ಮುಂಗಟ್ಟೆಯಲ್ಲಿ ನಿರ್ವಹಿಸಲಾಗುತ್ತದೆ. ಇಂತಹ ಐದಾರು ಮುಂಗಟ್ಟೆಗಳಿಗೆ ಒಂದೇ ಸಾಮಾನ್ಯ ಸರತಿಯ ಸಾಲಿದ್ದು ಯಾವ ಮುಂಗಟ್ಟೆ ಬಿಡುವಾಗಿರುತ್ತದೋ ಅಲ್ಲಿ ಮುಂದಿರುವ ಗ್ರಾಹಕನಿಗೆ ಸೇವಾ ಸೌಲಭ್ಯ ದೊರೆಯುತ್ತದೆ. ಈ ಮುಂಗಟ್ಟೆಗಳು ಗಣಕಯಂತ್ರ ಸಂಪರ್ಕ ಹೊಂದಿದ್ದು ಖಾತೆಯ ಇತ್ತೀಚಿನ ಸ್ಥಿತಿ ಮತ್ತು ವಿವರಗಳನ್ನು ತಿಳಿಸುತ್ತವೆ. ಎಲ್ಲರೂ ಚೆಕ್ಕುಗಳನ್ನು ಮುಕ್ತವಾಗಿ ಉಪಯೋಗಿಸುವುದರಿಂದ ಸಾಮಾನ್ಯವಾಗಿ ಸಣ್ಣಗಾತ್ರದ ವಹಿವಾಟುಗಳು ಮಾತ್ರ ಜರುಗುತ್ತವೆ. ಬ್ರಿಟನ್ ಬಹಳ ಸಣ್ಣ ರಾಷ್ಟ್ರವಾದ್ದರಿಂದ ಚೆಕ್ಕುಗಳನ್ನು ಎಲ್ಲ ಸ್ಥಳಗಳಿಂದ ಲಂಡನ್ನಿಗೆ ರಾತ್ರಿ ಅಂಚೆ ಸೇವೆ ಮೂಲಕ ತಲುಪಿಸಬಹುದು.

ಗ್ರಾಹಕರು ಯಾವುದೇ ಸ್ಥಳದಲ್ಲಿ ಪಾವತಿಯಾಗುವ ಚೆಕ್ಕುಗಳು ಜಮೆ ಮಾಡಿದಂದಿನಿಂದ 5ನೇ ಕೆಲಸದ ದಿನದಂದು ಧನಿಕೆ ಮಾಡಲ್ಪಡುತ್ತವೆ. ದೊಡ್ಡ ಮೊಬಲಗಿನ ಚೆಕ್ಕುಗಳ ಪಾವತಿಯನ್ನು ತ್ವರಿತಗೊಳಿಸಲು ಠೀರುವೆ ಮನೆಯ ಸ್ವತಶ್ಚಲೀ ಪಾವತಿ ಪದ್ಧತಿ (CHAPS : Clearing House Automated Payment System) ಎಂಬ ವ್ಯವಸ್ಥೆ ಇದೆ. ಈ ವ್ಯವಸ್ಥೆಯಲ್ಲಿ ಸದಸ್ಯ ಬ್ಯಾಂಕು

ಗಳು ನಿಧಿಗಳನ್ನು ಕಂಪ್ಯೂಟರ್ ಜಾಲದ ಮೂಲಕ ಅಂದಂದೇ ವರ್ಗಾಯಿಸಲು ಸಾಧ್ಯವಾಗಿದೆ.

ಸಾಮಾನ್ಯವಾಗಿ, ನಿಧಾನವನ್ನು ತಪ್ಪಿಸಲು ಹಣ ರವಾನೆಗಳು ದೂರಲಿಪಿಕದ(ಟೆಲೆಕ್ಸ್)ಮೂಲಕ ನಡೆಯುತ್ತವೆ. ಸಣ್ಣ ಮೊಬಲಗಿನ ಪಾವತಿಗಳಿಗೆ ವೈಯಕ್ತಿಕ ಚೆಕ್ಕುಗಳನ್ನು ನೀಡಲಾಗುತ್ತದೆ. ತೆರಿಗೆ ಪ್ರಾಧಿಕಾರಕ್ಕೆ ಉತ್ಪಾದನಾ ಸುಂಕ, ಆಮದು ಸುಂಕಗಳನ್ನು ಪಾವತಿ ಮಾಡುವಾಗ ಬ್ಯಾಂಕರನ ಪಾವತಿ ಆದೇಶ ಮತ್ತು ಬ್ಯಾಂಕರ್ ಚೆಕ್ಕುಗಳನ್ನು ಉಪಯೋಗಿಸುತ್ತಾರೆ. ಬ್ಯಾಂಕರನ ಪಾವತಿ ಆದೇಶದಲ್ಲಿ, ನಿಧಿ ವರ್ಗಾವಣೆಯನ್ನು ಟೆಲೆಕ್ಸ್ ಮೂಲಕ 10 ನಿಮಿಷ ಅಥವಾ ಇನ್ನೂ ಕಡಿಮೆ ಅವಧಿಯಲ್ಲಿ ನಿರ್ವಹಿಸಲಾಗುತ್ತದೆ ಎಂದರೆ ನಿಮಗೆ ಅಚ್ಚರಿಯಾಗಬಹುದು. ಉದರಿ ಖಾತರಿ ಪತ್ರ ಮತ್ತು ಬ್ಯಾಂಕ್ ಖಾತರಿಗಳನ್ನು ಕೇಳಿದ ದಿನವೇ ನೀಡಲಾಗುತ್ತದೆ. ಈ ಕ್ರಿಯೆಗಳಿಗೆ ಚುರುಕು ಪದ ಪ್ರಕ್ರಮೀಕಾರಕ (word-processor) ಹಾಗೂ ಇತರ ಗಣಕ ಯಂತ್ರಗಳನ್ನು ಉಪಯೋಗಿಸಲಾಗುತ್ತದೆ. ವಿದೇಶಿ ಹಣದ ವ್ಯಾಪಾರದಲ್ಲಿ ನಿಧಿನಿರ್ವಹಣೆ (fund management) ಬ್ಯಾಂಕು ವಹಿವಾಟುದಾರ (bank dealer) ಮತ್ತು ದಲ್ಲಾಳಿಗಳ (broker) ನಡುವೆ ದೂರವಾಣಿ ಮೂಲಕವೇ ಇತ್ಯರ್ಥವಾಗುತ್ತದೆ. ಅನಂತರ ಈ ವಹಿವಾಟುಗಳು ಬ್ಯಾಂಕುಗಳ ನಡುವೆ ದೂರಲಿಪಿಕ ಸಂದೇಶಗಳ ವಿನಿಮಯದೊಡನೆ ದೃಢೀಕೃತಗೊಳ್ಳುತ್ತವೆ. ಆದಾಗ್ಯೂ ಕೆಲವು ಬ್ಯಾಂಕುಗಳ ವಹಿವಾಟುದಾರರು ಮತ್ತು ದಲ್ಲಾಳಿಗಳೊಂದಿಗಿನ ದೂರವಾಣಿ ಮಾತುಕತೆಗಳನ್ನು ಧ್ವನಿಮುದ್ರಿಸಿಕೊಳ್ಳುತ್ತವೆ.

ದೊಡ್ಡ ಮೊಬಲಗನ್ನು ಠೇವಣಿಯಾಗಿಡುವ ಠೇವಣಿದಾರರಿಗೆ ಬ್ಯಾಂಕುಗಳು ಆ ನಿಧಿಯನ್ನು ಹಣದ ಮಾರುಕಟ್ಟೆಯಲ್ಲಿ ಎಷ್ಟು ಲಾಭದಾಯಕವಾಗಿ ತೊಡಗಿಸಬಹುದು ಎಂಬುದನ್ನು ಅವಲಂಬಿಸಿ ಠೇವಣಿಯ ವಿವಿಧ ಅವಧಿಗಳಿಗೆ ನೀಡುವ ಬಡ್ಡಿದರವನ್ನು ಬ್ಯಾಂಕು ಸೂಚಿಸುತ್ತದೆ. ಹಾಗೆಯೇ ಸಾಲದ ವಿಷಯದಲ್ಲೂ ಮಾರುಕಟ್ಟೆಯನ್ನು ಅವಲಂಬಿಸಿ ವಿಧಿಸುವ ಬಡ್ಡಿಯನ್ನು ನಿಗದಿ ಮಾಡುತ್ತದೆ. ಆದರೆ ಈ ದರಗಳು ಬ್ಯಾಂಕ್ ಆಫ್ ಇಂಗ್ಲೆಂಡಿನ ಹಾಗೂ ಬ್ಯಾಂಕ್‌ಗಳು ನಿರ್ಧರಿಸಿದ ಕನಿಷ್ಠ ಬಡ್ಡಿದರಕ್ಕಿಂತ ಕಡಿಮೆಯಾಗುವುದಿಲ್ಲ.

ಉದರಿ ಕಾರ್ಡು, ಅಥವಾ ಅಂಗಡಿಕಾರರ ಮಾತಿನಲ್ಲಿ ಹೇಳುವುದಾದರೆ 'ಪ್ಲಾಸ್ಟಿಕ್ ಹಣ'—ಬ್ಯಾಂಕುಗಳು ತಮ್ಮ ಖಾತೆದಾರರಿಗೆ ಹಾಗೂ ಖಾತೆದಾರರಲ್ಲದವರಿಗೆ ಒದಗಿಸುತ್ತಿರುವ ಒಂದು ಅತ್ಯುತ್ತಮ ಸೇವೆ.

ನಿಯತವಾದ ಆದಾಯಮೂಲವುಳ್ಳ ವ್ಯಕ್ತಿಯೋರ್ವನ ಉದರಿ ಯೋಗ್ಯತೆಯನ್ನು ಆಧರಿಸಿ ವಿವಿಧ ಬ್ಯಾಂಕುಗಳು ಉದರಿ ಕಾರ್ಡನ್ನು ನೀಡುತ್ತವೆ. ಬೇರೆಬೇರೆ ಬ್ಯಾಂಕುಗಳು ಸಹ ಒಂದೇ ಉದರಿ ಕಾರ್ಡ್ ಕಂಪನಿಗೆ ಸದಸ್ಯರಾಗಿರುವುದುಂಟು. ಬ್ರಿಟನ್ನಿನಲ್ಲಿ ಆಕ್ಸೆಸ್ ಅಥವಾ ಮಾಸ್ಟರ್ ಕಾರ್ಡ್ ಹಾಗೂ ವಿಸಾ ಅಥವಾ ಬಾರ್ಕ್ಲೇ ಕಾರ್ಡ್ ಎಂಬ ಎರಡು ಉದರಿ ಕಾರ್ಡ್ ಸಂಸ್ಥೆಗಳು ಅತ್ಯಂತ ಜನಪ್ರಿಯವಾಗಿವೆ.

ಬ್ರಿಟನ್ನಿನಲ್ಲಿ ಈ ಕಾರ್ಡುಗಳನ್ನು ಯಾವ ಶುಲ್ಕವನ್ನೂ ಪಡೆಯದೆ ನೀಡಲಾಗುತ್ತದೆ. ಉದರಿ ಕಾರ್ಡ್ ಧಾರಕರು ಅದನ್ನು ಸ್ವೀಕರಿಸುವ ಸೌಲಭ್ಯವುಳ್ಳ ಪ್ರಪಂಚದ ಯಾವುದೇ ಭಾಗದಲ್ಲಿನ ಅಂಗಡಿಗಳಲ್ಲಿ ತಮಗೆ ಬೇಕಾದ ವಸ್ತುಗಳನ್ನು ಖರೀದಿ ಮಾಡಬಹುದು. ಆದರೆ ಖರೀದಿಯ ಮೌಲ್ಯ ಕಾರ್ಡುದಾರನಿಗೆ ನಿಗದಿತವಾದ ಮೊಬಲಗನ್ನು ಮೀರಬಾರದು. ಈ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಒಂದೆರಡು ತಿಂಗಳ ವರೆಗೆ ಉದರಿ ದೊರೆಯುತ್ತದೆ. ಅಂಗಡಿಗಳವರು ಉದರಿ ಕಾರ್ಡಿನಡಿ ವ್ಯಾಪಾರ ಮೊತ್ತವನ್ನು ಪಡೆಯುವಾಗ ಶೇ. 1ರಿಂದ 10ರಷ್ಟು ಹಣವನ್ನು ಉದರಿ ಕಾರ್ಡ್ ಸಂಸ್ಥೆಗೆ/ಬ್ಯಾಂಕಿಗೆ ನೀಡಬೇಕಾಗುತ್ತದೆ. ನಗದು ನೀಡುವ ಯಂತ್ರ (cash dispenser) ಸಹ ಈ ಕಾರ್ಡ್ ಮೂಲಕ ಹಣ ಪಡೆಯಬಹುದು. ಹಣ ತೆಗೆದುಕೊಂಡಂದಿನಿಂದ ಮಾತ್ರ ಪಡೆದ ಹಣಕ್ಕೆ ಬಡ್ಡಿ ವಿಧಿಸಲಾಗುವುದು.

ಕಳೆದುಹೋದ ಕಾರ್ಡುಗಳ ದುರುಪಯೋಗದಿಂದ ಹಾಗೂ ವಂಚನೆ ಪ್ರಕರಣಗಳಿಂದ ಉದರಿ ಕಾರ್ಡ್ ಕಂಪನಿಗಳು ಸಾಮಾನ್ಯವಾಗಿ (5 ದಶಲಕ್ಷ) $5,000,000 ನಷ್ಟವನ್ನು ಅನುಭವಿಸುತ್ತಿವೆ ಎಂಬ ಅಂದಾಜಿದೆ. ಆದರೆ ಅವು ಸಂಪಾದಿಸುತ್ತಿರುವ ಹೆಚ್ಚಿನ ಲಾಭದಿಂದಾಗಿ ಇಂತಹ ನಷ್ಟವನ್ನು ಉದರಿ ಕಾರ್ಡ್ ಕಂಪನಿಗಳು ತಾವೇ ಭರಿಸುತ್ತವೆ.

ಉದರಿ ಕಾರ್ಡ್ ಕಂಪನಿಗಳು ವಂಚನೆಯನ್ನು ತಡೆಗಟ್ಟಲು ಅನೇಕ ಕ್ರಮಗಳನ್ನು ಕೈಗೊಂಡಿವೆ. ವ್ಯಾಪಾರಿಗಳು ಈಗೀಗ ಉದರಿ ಕಾರ್ಡ್ ನಿಜವಾದದ್ದೇ ಇಲ್ಲವೇ ಎಂಬುದನ್ನು ಕಂಡುಹಿಡಿಯುವಂತಹ ವಿಶೇಷ ಯಂತ್ರಗಳನ್ನು ಹೊಂದಿರುತ್ತಾರೆ. ವರ್ಷದ ಎಲ್ಲ ದಿನಗಳಲ್ಲೂ ಎಲ್ಲ ಕಾಲದಲ್ಲಿಯೂ ಕಾರ್ಯಪ್ರವೃತ್ತವಾಗಿರುವ ಉದರಿ ಕಾರ್ಡ್ ಕಂಪನಿಗಳು ವ್ಯಾಪಾರಿಗಳಿಗೆ ಅಧಿಕೃತ ಸಂಕೇತ ಸಂಖ್ಯೆಯೊಂದನ್ನು ನೀಡುತ್ತವೆ. ಹಾಜರಿ ಮಾಡಲಾದ ಉದರಿ ಕಾರ್ಡಿನ ಮೇಲೆ ಸಹ ಈ ಸಂಕೇತ ಸಂಖ್ಯೆ ಇದ್ದರೆ ಪಾವತಿ ಖಾತರಿಯಾಗುತ್ತದೆ. ಇದು ಚೆಕ್ಕುಗಳ 'ಮಾರ್ಕಿಂಗ್ ಗುಡ್ ಫಾರ್ ಪೇಮೆಂಟ್'ನಂತೆ (ಪಾವತಿಯೋಗ್ಯವೆಂಬ ಗುರುತು). ಬಹುತೇಕ ಮಾಮೂಲು ಸೇವೆಗಳನ್ನು ಮುಂಗಟ್ಟೆಯಲ್ಲಿಯೇ ಒದಗಿಸಲಾಗುತ್ತದೆ. ವ್ಯಾಪಾರದ ಅಭಿವೃದ್ಧಿಗಾಗಿ ಅಥವಾ ಸಾಲದ ಬಗ್ಗೆ ವೈಯಕ್ತಿಕ ಮಾತುಕತೆಗಳು ಬ್ಯಾಂಕಿನ ಸಭಾಗೃಹದಲ್ಲಿ ಅಥವಾ ಭೋಜನದ ಸಮಯದಲ್ಲಿ ನಡೆಯುತ್ತವೆ. ಸಾಮಾನ್ಯವಾಗಿ ಭೇಟಿಯನ್ನು ಹಾಗೂ ಮಾತುಕತೆಗಳ ಅಂಶಗಳನ್ನು ಮುಂಚೆಯೇ ನಿರ್ಧರಿಸಿ ವ್ಯವಸ್ಥೆ ಮಾಡಲಾಗುವುದರಿಂದ ಸಮಯದ ಉಳಿತಾಯವಾಗುತ್ತದೆ. ಸಾಮಾನ್ಯವಾಗಿ ಬ್ಯಾಂಕು ನೌಕರರು ಕೆಲಸ ಮಾಡುವ ಸ್ಥಳಕ್ಕೆ ಭದ್ರತೆಯ ದೃಷ್ಟಿಯಿಂದಾಗಿ ಪ್ರವೇಶವಿರುವುದಿಲ್ಲ. ದೂರವಾಣಿಯ ಮುಖಾಂತರವೇ ವಿವರಣೆ. ವಿವರಗಳಿಗೆ ಬೇಡಿಕೆ ಬರುವುದರಿಂದ ಪತ್ರವ್ಯವಹಾರವನ್ನು ಕನಿಷ್ಠ ಮಟ್ಟಕ್ಕೆ ಇಳಿಸಲಾಗುತ್ತದೆ. ಪತ್ರಗಳ ಮೇಲೆ ಸಂಪರ್ಕ ವ್ಯಕ್ತಿ ಅಥವಾ ಸಂಬಂಧಪಟ್ಟ ವ್ಯಕ್ತಿಯನ್ನು ಹೆಸರಿಸಿದರೆ ಅದು ಸರಿಯಾದ ವ್ಯಕ್ತಿಗೆ ತಲುಪಿ, ಶೀಘ್ರ ಕಾರ್ಯಪ್ರವೃತ್ತರಾಗಲು ಅನುವಾಗುವುದರಿಂದ ಪತ್ರದ ಮೇಲೆ 'ಸಂಪರ್ಕ ವ್ಯಕ್ತಿ'ಯ ಹೆಸರನ್ನು ಬರೆಯಲು ಬ್ಯಾಂಕುಗಳು ಗ್ರಾಹಕರಿಗೆ ಮನವಿ ಮಾಡುತ್ತವೆ. ದೂರವಾಣಿಯ ಮೂಲಕ ಮಾತನಾಡುವಾಗಲೂ ಗ್ರಾಹಕರಿಗೆ ಸಂಪರ್ಕ ವ್ಯಕ್ತಿಯ ದೂರವಾಣಿ ಸಂಖ್ಯೆ ತಿಳಿದಿರುವುದು ಒಳ್ಳೆಯದು. ವಿಶೇಷ ವಿಭಾಗಗಳಲ್ಲಿ ಕೆಲಸ ಮಾಡುವವರಿಗೆ ಹೆಚ್ಚಿನ ಪರಿಣತಿ ಬೇಕಾಗಿರುವುದರಿಂದ ಗ್ರಾಹಕರು ಒಂದು ವೇಳೆ ಸರಿಯಾದ ವ್ಯಕ್ತಿಯನ್ನು ಸಂಪರ್ಕಿಸದಿದ್ದಲ್ಲಿ ಬೇಕಾದ ವಿಚಾರ ತಿಳಿಯುವುದು ಕಷ್ಟವಾಗುವುದು. ಒಂದೇ ಶಾಖೆಯಲ್ಲಿನ ಬೇರೆಬೇರೆ ವಿಭಾಗಗಳ ಬಗೆಗೆ ಸಿಬ್ಬಂದಿಗೆ ಹೆಚ್ಚಿನ ತಿಳಿದಿರುವುದಿಲ್ಲ. ತಮ್ಮ ಮೇಜಿನ ಕೆಲಸದಲ್ಲಿ ಮಾತ್ರ ಅವರು ನಿಷ್ಣಾತರಾಗುತ್ತಾರೆ. ಹಾಗಾಗಿ ಬೇಕಾದ ವ್ಯಕ್ತಿಯನ್ನು ಸಂಪರ್ಕಿಸುವುದೇ ಒಂದು ಸಮಸ್ಯೆಯಾಗಿಬಿಡುತ್ತದೆ.

# ಬ್ಯಾಂಕಿಂಗ್ ಸುದ್ದಿಸಾರ

ಕೆ. ಎನ್. ಮಹಾಬಲ

**ಆರೋಗ್ಯ ಸಂಹಿತೆ**

ಬ್ಯಾಂಕುಗಳು ನೀಡುತ್ತಿರುವ ಸಾಲದ ಗಾತ್ರ ಅಗಾಧವಾಗಿ ಹೆಚ್ಚುತ್ತಿರುವ ಈ ಸಮಯದಲ್ಲಿ ಅವುಗಳ ಗುಣಮಟ್ಟವನ್ನು ಕಾಪಾಡಲು ಮತ್ತು ವಸೂಲಾತಿಯ ಮಟ್ಟವನ್ನು ಹೆಚ್ಚಿಸಲು ರಿಸರ್ವ್ ಬ್ಯಾಂಕ್ ಆರೋಗ್ಯ ಸಂಹಿತೆ ಪದ್ಧತಿಯೊಂದನ್ನು ಜಾರಿಗೆ ತಂದಿದೆ. ಎಲ್ಲ ಬ್ಯಾಂಕುಗಳೂ 31–12–85ರಲ್ಲಿದ್ದಂತೆ ತಮ್ಮ ಸಾಲಗಳನ್ನು ಈ ಎಂಟು ರೀತಿಯಲ್ಲಿ ವರ್ಗೀಕರಿಸಬೇಕಾಗಿದೆ :

1 ತೃಪ್ತಿಕರ ಸಾಲಗಳು, 2 ಅನಿಯತ ಸಾಲಗಳು, 3 ಅಸ್ವಸ್ಥ (ಜೀವನಸಾಮರ್ಥ್ಯವುಳ್ಳ ಮತ್ತು ಶುಶ್ರೂಷೆಯಲ್ಲಿರುವ) ಸಾಲಗಳು, 4 ಅಸ್ವಸ್ಥ (ಜೀವನಸಾಮರ್ಥ್ಯವಿಲ್ಲದ) ಸಾಲಗಳು, 5 ವಾಪಸು ಕರೆದ ಮುಂಗಡಗಳು, 6 ದಾವಾ ಹೂಡಿರುವ ಮುಂಗಡಗಳು, 7 ಡಿಕ್ರಿಯಾದ ಮುಂಗಡಗಳು, 8 ಕರಡು ಸಾಲಗಳು.

ಮುಂಗಡಗಳ ವರ್ಗೀಕರಣದ ವಿಷಯದಲ್ಲಿ ಏಕರೂಪತೆ ಸಾಧಿಸುವುದೂ ಈ ಕ್ರಮದಿಂದ ಸಾಧ್ಯ.

**ವ್ಯವಹಾರಗಳ ದುಂಡಂಕಿ**

ಠೇವಣಿಗಳ ಮೇಲೆ ನೀಡುವ ಸಾಲಗಳಿಗೆ ವಿಧಿಸುವ ಬಡ್ಡಿದರವೂ ಸೇರಿದಂತೆ ತನ್ನೆಲ್ಲ ವ್ಯವಹಾರಗಳನ್ನೂ ಹತ್ತಿರದ ಐದು ಪೈಸೆಗೆ ದುಂಡಂಕಿ (ರೌಂಡ್ ಆಫ್) ಮಾಡಬೇಕೆಂದು ರಿಸರ್ವ್ ಬ್ಯಾಂಕ್ ವಾಣಿಜ್ಯ ಬ್ಯಾಂಕುಗಳಿಗೆ ಆದೇಶ ನೀಡಿದೆ. ಎರಡು ಹಾಗೂ ಮೂರು ಪೈಸೆ ನಾಣ್ಯಗಳ ಕೊರತೆ ಈ ಕ್ರಮಕ್ಕೆ ಕಾರಣವೆನ್ನಲಾಗಿದೆ.

ಕೆ. ಎನ್. ಮಹಾಬಲ, ಭಾರತೀಯ ಸ್ಟೇಟ್ ಬ್ಯಾಂಕ್; ಬನಶಂಕರಿ ಎರಡನೆಯ ಹಂತ, ಬೆಂಗಳೂರು 560 070

**ಬೇರೆ ಹೆಸರು**

ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಒಂದಾದ 'ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್' ತನ್ನ ಹೆಸರನ್ನು 'ಯುಕೋ ಬ್ಯಾಂಕ್' ಎಂದು ಬದಲಿಸಿಕೊಂಡಿದೆ. ಬಾಂಗ್ಲಾದೇಶದಲ್ಲಿ ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್ ಎಂಬ ಹೆಸರಿನ ಬ್ಯಾಂಕ್ ಇರುವುದರಿಂದ ಈ ಬದಲಾವಣೆ ಅನಿವಾರ್ಯವಾಯಿತೆಂದು ಬ್ಯಾಂಕ್ ತಿಳಿಸಿದೆ.

**ಭಾರತದ ಅಗ್ರಸ್ಥಾನ**

1985ರ ಜೂನ್ 30ರಂದು ಪ್ರಕಟವಾದ ವಿಶ್ವ ಬ್ಯಾಂಕ್ ವರದಿಯಂತೆ ವಿಶ್ವ ಬ್ಯಾಂಕಿನಿಂದ ಸಾಲ ನೆರವು ಪಡೆಯುವ ದೇಶಗಳಲ್ಲಿ ಭಾರತ ಅಗ್ರಸ್ಥಾನದಲ್ಲಿದೆ. 1985ರ ಅವಧಿಯಲ್ಲಿ ಭಾರತ ವಿಶ್ವ ಬ್ಯಾಂಕಿನಿಂದ 167·4 ಕೋಟಿ ಡಾಲರುಗಳ ಸಾಲ ಪಡೆದಿದೆ. 152.3 ಕೋಟಿ ಸಾಲ ಪಡೆದಿರುವ ಬ್ರಜಿಲಿನದು ಎರಡನೆಯ ಸ್ಥಾನ. ಮೂರನೆಯ ಸ್ಥಾನದಲ್ಲಿರುವ ದೇಶ ಇಂಡೋನೇಷಿಯ (97.3 ಕೋಟಿ ಡಾಲರ್).

**ಬಂಡವಾಳ ವಿಸ್ತರಣೆ**

ರಾಷ್ಟ್ರೀಕೃತ ಬ್ಯಾಂಕುಗಳ ಪಾವತಿಯಾದ ಬಂಡವಾಳದ ಪರಿಮಾಣವನ್ನು ಹೆಚ್ಚಿಸಲು ಕೇಂದ್ರ ಸರಕಾರ ನಿರ್ಧರಿಸಿದೆ. ಪರಿನಿಯತ ಪರಿಮಿತಿ ಈಗಿನ ರೂ. 15 ಕೋಟಿಯಿಂದ ರೂ 100 ಕೋಟಿಗೆ ಏರಲಿದೆ.

ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ ಸಹವರ್ತಿ ಬ್ಯಾಂಕುಗಳ ಅಧಿಕೃತ ಬಂಡವಾಳ ರೂ. 10 ಕೋಟಿಯಿಂದ ರೂ. 70 ಕೋಟಿಗೂ ಪಾವತಿಯಾದ ಬಂಡವಾಳ ರೂ. 5 ಕೋಟಿಯಿಂದ ರೂ. 22.45 ಕೋಟಿಗೂ ಹೆಚ್ಚಲಿದೆ.

**ಯೂನಿಟ್ ಟ್ರಸ್ಟ್ ಹೊಸ ಯೋಜನೆ**

ಸಾರ್ವಜನಿಕ ವಿನಿಯೋಜಕರ ಉಪಯೋಗಕ್ಕಾಗಿ ಯೂನಿಟ್ ಟ್ರಸ್ಟ್ ಆಫ್ ಇಂಡಿಯ ಹೊಸ ಯೋಜನೆಯೊಂದನ್ನು ರೂಪಿಸಿದೆ.
(ಮುಂದಿನ ಪುಟಕ್ಕೆ)

---

(ಹಿಂದಿನ ಪುಟದಿಂದ)

ಆದರಲ್ಲಿಯೂ ಗ್ರಾಹಕ ತನಗೆ ಏನು ಬೇಕು ಎಂಬುದನ್ನು ಸ್ಪಷ್ಟಪಡಿಸಲಾಗದಿದ್ದರೆ ಈ ಸಮಸ್ಯೆಯ ತೀವ್ರತೆ ಮತ್ತಷ್ಟು ಹೆಚ್ಚುತ್ತದೆ. ಆದರೂ ಸಹ ಗ್ರಾಹಕರು ದೂರವಾಣಿಯಲ್ಲಿ ಹೇಳಿದುದೆಲ್ಲವನ್ನೂ ಅಲ್ಲಿನ ಬ್ಯಾಂಕ್ ಸಿಬ್ಬಂದಿ ಟಿಪ್ಪಣಿ ಮಾಡಿಕೊಂಡು ಪುನಃ ಅವರನ್ನು ಸಂಪರ್ಕಿಸುತ್ತಾರೆ. ಸಾಮಾನ್ಯವಾಗಿ ದೂರುಗಳು ಬ್ಯಾಂಕ್ ಶುಲ್ಕದ ಬಗ್ಗೆ ಮಾತ್ರ ಇರುತ್ತವೆ. ಬ್ಯಾಂಕಿನ ಎಲ್ಲ ಮುಂಗಡ ದರ ಠೇವಣಿ ದರಗಳು ಬ್ಯಾಂಕಿನ ಸಾಲ ನೀಡಿಕೆಯ ಕನಿಷ್ಠ ದರಕ್ಕೆ ಹೊಂದಿಕೊಂಡಿರುತ್ತವೆ. ಇದನ್ನು ಮೂಲ ದರವೆನ್ನುತ್ತಾರೆ (base rate). ಇದು ಮಾರುಕಟ್ಟೆಯಲ್ಲಿನ ಹಣ ಬೇಡಿಕೆ, ಪೂರೈಕೆಗನುಗುಣವಾಗಿ ಬದಲಾಗುತ್ತಿರುತ್ತದೆ.

ಈ ಪ್ರಬಂಧದಲ್ಲಿ ನಾನು ಕೆಲವು ವಿಷಯಗಳನ್ನು ಚರ್ಚಿಸದಿರಬಹುದು. ನೀತಿಗಳಲ್ಲಿ ಇತ್ತೀಚಿನ ಬದಲಾವಣೆಯಿಂದಾಗಿ ಅಲ್ಲಲ್ಲಿ ಕೆಲವು ತಪ್ಪುಗಳೂ ನುಸುಳಿರಬಹುದು. ಆದಾಗ್ಯೂ ಈ ಪ್ರಬಂಧ ಬ್ರಿಟನ್ನಿನಲ್ಲಿ ಅದರಲ್ಲಿಯೂ ನಿರ್ದಿಷ್ಟವಾಗಿ ಲಂಡನ್ನಿನಲ್ಲಿ ಬ್ಯಾಂಕುಗಳು ಗ್ರಾಹಕರಿಗೆ ಸಲ್ಲಿಸುವ ಸೇವೆಯ ಬಗೆಗೆ ಒಂದು ಸ್ಥೂಲ ಚಿತ್ರವನ್ನು ಕೊಡುತ್ತದೆ ಎಂದು ನಂಬಿದ್ದೇನೆ. ಅಲ್ಲಿಯ ಬ್ಯಾಂಕಿಂಗ್ ವ್ಯವಸ್ಥೆಯೂ ಸಂಪೂರ್ಣ ಸುರಕ್ಷಿತವಲ್ಲ. ಕಾರ್ಯಸಾಧ್ಯತೆ ಹಾಗೂ ತ್ವರಿತ ಸೇವೆಯನ್ನು ನೀಡುವ ಉದ್ದೇಶದಿಂದ ಈ ಸಡಿಲತೆ ಆಗಿದೆ.

ಆಧುನಿಕ ಸಂಪರ್ಕಜಾಲ, ಗಣಕೀಕರಣ, ಮೂಲತಃ ಜನರ ಪ್ರಾಮಾಣಿಕತೆ ಹಾಗೂ ಶಿಸ್ತು, ಅವರು ವ್ಯವಹಾರಜ್ಞಾನ ಹೊಂದಿದವರಾಗಿರುವುದು—ಇವು ಸೇವೆಯ ಗುಣಮಟ್ಟವನ್ನು ಹೆಚ್ಚಿಸಿವೆ ಎಂಬ ಮುಕ್ತಾಯ ಮಾತುಗಳೊಂದಿಗೆ ಈ ಪ್ರಬಂಧವನ್ನು ಮುಗಿಸುತ್ತೇನೆ.

● ● ●

# ಹೀಗೆಂದರೇನು ?

ಮು. ಮಲ್ಲಿಕಾರ್ಜುನ

'ಹೀಗೆಂದರೇನು ? —ಇದು ಈ ಸಂಚಿಕೆಯೊಂದಿಗೆ ಆರಂಭವಾಗುತ್ತಿರುವ ಒಂದು ಸ್ಥಿರ ಶೀರ್ಷಿಕೆ. ಬ್ಯಾಂಕಿಂಗು ಸದಾ ಬೆಳೆಯುತ್ತಿರುವ, ವಿಸ್ತರಿಸುತ್ತಿರುವ ಕ್ಷೇತ್ರ. ಹೊಸ ಹೊಸ ಅಗತ್ಯಗಳಿಗೆ ತಕ್ಕಂತೆ ಹೊಸಹೊಸ ಶಬ್ದಗಳೂ ಪದ ಗುಚ್ಛಗಳೂ ಇಲ್ಲಿ ಬಳಕೆಗೆ ಬರುತ್ತಿವೆ. 'ಹೀಗೆಂದರೇನು ?' ಶೀರ್ಷಿಕೆಯಡಿಯಲ್ಲಿ ಇವುಗಳ ವಿವರಣೆ, ವಿವೇಚನೆ ನೀಡ ಲಾಗುತ್ತದೆ. ಪ್ರತಿ ಸಂಚಿಕೆಯಲ್ಲೂ ಇಂಥ ಒಂದು ವಿಶಿಷ್ಟ ಬೆಳವಣಿಗೆಯ ಬಗ್ಗೆ ಬರೆಯಲಾಗುತ್ತದೆ. ಈ ಬಾರಿಯ ವಿಷಯ : 'ಚರ ದರ ಠೇವಣಿ ಪತ್ರ.'

**ಚರ ದರ ಠೇವಣಿ ಪತ್ರ**

ಈಚಿನ ದಿನಗಳಲ್ಲಿ ಆಗಿಂದಾಗ್ಗೆ ಎರಡು ವಿಚಾರಗಳ ಬಗ್ಗೆ ಪತ್ರಿಕೆ ಗಳಲ್ಲಿ ಪದೇಪದೇ ಸುದ್ದಿಗಳು ಪ್ರಕಟವಾಗುತ್ತಿವೆ. ಉದಾಹರಣೆಗೆ, ಭಾರತೀಯ ಸ್ಟೇಟ್ ಬ್ಯಾಂಕು ಅಂತರರಾಷ್ಟ್ರೀಯ ಹಣ ಮಾರು ಕಟ್ಟೆಯಲ್ಲಿ 10 ಕೋಟಿ ಡಾಲರ್ ಹಣವನ್ನು ಎತ್ತಿತು ; ಮತ್ತೊಂದು ಬ್ಯಾಂಕು ಇನ್ನೆಷ್ಟೋ ಹಣವನ್ನು ಅಂತರರಾಷ್ಟ್ರೀಯ ಹಣ ಮಾರು ಕಟ್ಟೆಯಲ್ಲಿ ವಿನಿಯೋಜಿಸಿತು ; ಮತ್ತೊಂದು ಬ್ಯಾಂಕು ಈ ಕ್ಷೇತ್ರವನ್ನು ಪ್ರವೇಶಿಸಿತು. ಹೀಗೆಲ್ಲ ವರದಿಗಳು ಬರು ತ್ತಿವೆ. ಬ್ಯಾಂಕುಗಳು ನಾನಾ ಸಂಲೇಖಗಳ ಮೂಲಕ ಹಣ ಎತ್ತುತ್ತಿರುತ್ತವೆ, ತೊಡಗಿಸುತ್ತಿರುತ್ತವೆ. ಚರ ದರ ಠೇವಣಿ (ಪ್ರಮಾಣ) ಪತ್ರಗಳು (Floating Rate Certificates of Deposit-FRCD) ಹಾಗೂ ಚರ ದರ ಲೇಖಗಳು (Floating Rate Notes)–ಇವು ಈಚೆಗೆ ಪ್ರಚಲಿತವಾಗಿರುವ ಹೊಸ ಸಂಲೇಖ ಗಳು. 'ಚರ ದರ ಠೇವಣಿ ಪತ್ರಗಳು' ಎಂದರೆ ಏನೆಂಬುದನ್ನು ನೋಡೋಣ.

ಯಾವುದೇ ಬ್ಯಾಂಕಿಗೆ ತನ್ನ ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಹಣದ ಅಗತ್ಯ ಉಂಟಾದರೆ ಅದನ್ನು ಪೂರೈಸಿಕೊಳ್ಳಲು ಅಂತರ ರಾಷ್ಟ್ರೀಯ ಹಣ ಮಾರುಕಟ್ಟೆಯಲ್ಲಿ ಅದು ಚರ ದರ ಠೇವಣಿ ಪತ್ರ ಗಳನ್ನು ನೀಡುತ್ತದೆ. ಇದನ್ನು ಸಾಮಾನ್ಯವಾಗಿ ಯೂರೋ–ಚಲಾರ್ಥ ದಲ್ಲಿ (Euro-currency) – ಮುಖ್ಯವಾಗಿ ಅಮೆರಿಕನ್ (ಯು. ಎಸ್.) ಡಾಲರಿನಲ್ಲಿ—ನೀಡುತ್ತದೆ. ಆ ಸಮಯದಲ್ಲಿ ಹೆಚ್ಚುವರಿ

(ಮುಂದಿನ ಪುಟಕ್ಕೆ)

(ಹಿಂದಿನ ಪುಟದಿಂದ)

'ವರ್ಧಿಸುವ ವರಮಾನ–ಯೂನಿಟ್ ಯೋಜನೆ 1986' ಎಂದು ಕರೆಯಲಾಗಿರುವ ಈ ಯೋಜನೆಯಲ್ಲಿ ಎರಡು ತಿಂಗಳ ಕಾಲ $5\frac{1}{2}$ ವರ್ಷ ಅವಧಿಯ ಯೂನಿಟ್‌ಗಳನ್ನು ಮಾರಲಾಗುತ್ತದೆ. ಡಿವಿಡೆಂಡ್ ದರಗಳು ಮೊದಲ ಆರು ತಿಂಗಳುಗಳಿಗೆ ಶೇ. 12, ಮುಂದಿನ ಎರಡು ವರ್ಷಗಳಿಗೆ ಶೇ. 12.5, ಅದರ ಮುಂದಿನ ಎರಡು ವರ್ಷಗಳಿಗೆ ಶೇ. 13 ಮತ್ತು ಕಡೆಯ ವರ್ಷ 13.5 ಇರುತ್ತವೆ. ಐದೂವರೆ ವರ್ಷಗಳ ಅನಂತರ ಯೂನಿಟ್ ಟ್ರಸ್ಟ್ ಆಫ್ ಇಂಡಿಯ ಶೇ. ಎರಡು ಅಧಿಮೌಲ್ಯ(premlum)ದೊಂದಿಗೆ ಯೂನಿಟ್ಟುಗಳನ್ನು ಮರು ಖರೀದಿ ಮಾಡುತ್ತದೆ.

**ಟೆಲಿಟೆಕ್ಸ್ ಸಂಪರ್ಕ ಕ್ರಾಂತಿ**

ವಿಶ್ವದ ವಿವಿಧ ಮಾರುಕಟ್ಟೆಗಳಲ್ಲಿ ವಹಿವಾಟಾಗುವ ಉತ್ಪನ್ನ ಗಳ ದರ, ವಿನಿಮಯ ದರ ಮುಂತಾದ ವಿಷಯಗಳಲ್ಲಿ ತಾಜಾ ವರ್ತಮಾನ ಒದಗಿಸಬಲ್ಲ 'ಟೆಲಿಟೆಕ್ಸ್' ಪದ್ಧತಿಯನ್ನು ಕೇಂದ್ರ ವಾರ್ತಾ ಮತ್ತು ಪ್ರಸಾರ ಇಲಾಖೆ 1985ರ ನವೆಂಬರ್ 19ರಿಂದ ಜಾರಿಗೆ ತಂದಿದೆ. ಇದಕ್ಕಾಗಿ ಫ್ರಾನ್ಸಿನಿಂದ 15,000 ಡೀಕೋಡರ್ ಗಳನ್ನು ಆಮದು ಮಾಡಿಕೊಳ್ಳಲಾಗಿದೆ. ಪಿಟಿಐ ತನ್ನ ಅಂತರ ರಾಷ್ಟ್ರೀಯ ಸಂಸ್ಥೆಯಾದ ರಾಯಟರ್‌ನ ಸಹಾಯದಿಂದ ಅಂತರ ರಾಷ್ಟ್ರೀಯ ವಿದ್ಯಮಾನಗಳನ್ನು ಟಿವಿ ಪರದೆಯ ಮೇಲೆ ನೀಡುತ್ತದೆ. ಸದ್ಯಕ್ಕೆ ಈ ಸೌಲಭ್ಯ ದೆಹಲಿ ವೀಕ್ಷಕರಿಗೆ ಮಾತ್ರ ಲಭ್ಯ.

**ಬಡ್ಡಿದರ: ಹೊಸ ವಿಚಾರ**

ಅರ್ಥವ್ಯವಸ್ಥೆಯ ಕಾರ್ಯದ ಸಮೀಕ್ಷೆ ನಡೆಸಲು ರಿಸರ್ವ್ ಬ್ಯಾಂಕ್ ನೇಮಿಸಿದ್ದ ಪ್ರೊ. ಸುಖಮಯ್ ಚಕ್ರವರ್ತಿ ಸಮಿತಿ ತನ್ನ ವರದಿ ನೀಡಿವೆ. ಅದರಲ್ಲಿ ಒಂದು ಶಿಫಾರಸು ಬ್ಯಾಂಕಿಂಗಿನ ದೃಷ್ಟಿ ಯಿಂದ ಗಮನಾರ್ಹವಾದ್ದು. ವಾಣಿಜ್ಯ ಬ್ಯಾಂಕುಗಳು ತಂತಮ್ಮ ಆಂತರಿಕ ಮೀಸಲು ಪ್ರಮಾಣ, ಲಾಭ ಪ್ರಮಾಣ ಇವುಗಳನ್ನು ಗಮನದಲ್ಲಿರಿಸಿಕೊಂಡು ಸ್ವತಂತ್ರವಾಗಿ ಬಡ್ಡಿದರಗಳನ್ನು ವಿಧಿಸಬಹು ದೆಂದು ಅದು ಸಲಹೆ ಮಾಡಿದೆ. ಇದು ಜಾರಿಗೆ ಬರುವುದೇ ? ಯಶಸ್ವಿಯಾಗುವುದೇ ? ಎಂದು ಎಲ್ಲರೂ ಕುತೂಹಲದಿಂದ ಗಮ ನಿಸುತ್ತಿದ್ದಾರೆ.

**1985–1990 : ಅನುಜ್ಞಾ ನೀತಿ**

ಈ ಅವಧಿಯಲ್ಲಿ ಬ್ಯಾಂಕುಗಳ ಶಾಖಾ ವಿಸ್ತರಣೆಯನ್ನು ಎರಡು ಹಂತಗಳಲ್ಲಿ ಮಾಡಲಾಗುವುದು. ಮೊದಲ ಹಂತ 1985ರ ಏಪ್ರಿಲ್ ನಿಂದ 1988ರ ಮಾರ್ಚ್ ವರೆಗೆ; ಎರಡನೆಯ ಹಂತ 1988ರ ಏಪ್ರಿಲ್‌ನಿಂದ 1990ರ ಮಾರ್ಚ್ ವರೆಗೆ. ನಿರ್ದಿಷ್ಟ ಅಗತ್ಯ, ವಿಸ್ತಾರ, ಆರ್ಥಿಕ ಸಾಮರ್ಥ್ಯ ಇವೇ ಅನುಜ್ಞೆ ನೀಡಲು ಆಧಾರ ವಾಗಿರುತ್ತವೆ. ಗುಡ್ಡಗಾಡು ಪ್ರದೇಶಗಳೂ, ವಿರಳವಾಗಿ ಜನಸಂಖ್ಯೆ ಇರುವ ಪ್ರದೇಶಗಳೂ ಪ್ರಾಧಾನ್ಯ ಪಡೆಯಲಿವೆ. 1981ರ ಜನ ಗಣತಿ ಆಧಾರದ ಮೇಲೆ ಗ್ರಾಮೀಣ ಹಾಗೂ ಅರೆಪಟ್ಟಣ ಪ್ರದೇಶ ದಲ್ಲಿ ಪ್ರತಿ 17,000 ಜನಸಂಖ್ಯೆಗೆ ಒಂದರಂತೆ ಶಾಖೆಯನ್ನು ತೆರೆಯುವ ಉದ್ದೇಶವಿದೆ. ಕೊರತೆ ಪ್ರದೇಶವನ್ನು ಗುರುತಿಸುವ ಹೊಣೆ ಅಗ್ರ ಬ್ಯಾಂಕಿನದಾಗಿರುತ್ತದೆ. ಹತ್ತು ಕಿಮೀ ಅಂತರದಲ್ಲಿ ಗ್ರಾಮೀಣ ಜನತೆಗೆ ಬ್ಯಾಂಕೊಂದು ಲಭ್ಯವಿರಬೇಕು ಎಂಬುದು ಹೊಸ ಶಾಖಾ ಅನುಜ್ಞಾ ನೀತಿಯ ಆಶಯ.



ಸಂಪನ್ಮೂಲ ಹೊಂದಿರುವ ಬ್ಯಾಂಕುಗಳು ಈ ಪತ್ರಗಳಲ್ಲಿ ಹಣ ತೊಡಗಿಸುತ್ತವೆ.

ಸಾಮಾನ್ಯವಾಗಿ ಇಂಥ ಪತ್ರದ ಪರಿಪಕ್ವತಾ ಅವಧಿ ಐದು ವರ್ಷ. ಮೂರು ವರ್ಷಗಳ ಠೇವಣಿ ಪತ್ರಗಳೂ ಚಲಾವಣೆಯಲ್ಲಿವೆ. ದೀರ್ಘಾವಧಿಯ ಹಣದ ಆವಶ್ಯಕತೆಗಾಗಿ ಗೊತ್ತಾದ ಬಡ್ಡಿ ದರದಲ್ಲಿ ಹಣ ಪಡೆಯಲು ಇದು ಸಹಾಯಕ. ಒಂದು ಸಾರಿಗೆ 100 ಲಕ್ಷ ಡಾಲರ್ ವರೆಗೂ ಹಣ ಪಡೆಯಬಹುದು. ಈ ಪತ್ರಗಳ ಮೌಲ್ಯ ವರ್ಗಗಳು (ಡಿನಾಮಿನೇಷನ್ಸ್) 10,000 ಡಾಲರ್‌ಗಳಿಂದ 1.00,000 ಡಾಲರ್ ವರೆಗೂ ಇರುತ್ತವೆ.

ಕೆಲ ಕಾಲ ಹಿಂದೆ ಭಾರತೀಯ ಸ್ಟೇಟ್ ಬ್ಯಾಂಕ್ 10 ಕೋಟಿ ಡಾಲರ್‌ಗಳ ಚರ ದರ ಠೇವಣಿ ಪತ್ರಗಳನ್ನು ನೀಡಿತು. ಇವುಗಳಲ್ಲಿ ಹಣ ತೊಡಗಿಸಲು ಒಪ್ಪಿರುವ ಐದಾರು ಬ್ಯಾಂಕುಗಳಿಂದ—ಅಗತ್ಯ ಬಂದಂತೆ—ಹಣ ಪಡೆಯಲು ಸ್ಟೇಟ್ ಬ್ಯಾಂಕ್ ನಿರ್ಧರಿಸಿದೆ. ಸಾಮಾನ್ಯವಾಗಿ ಈ ಠೇವಣಿ ಪತ್ರದ ಬಡ್ಡಿ ದರ ಲಿಬಾರ್‌ಗಿಂತ (ಲಂಡನ್ ಇಂಟರ್-ಬ್ಯಾಂಕ್ ಆಫರ್‌ಡ್ ರೇಟ್ : ಲಂಡನ್ ಅಂತರ ಬ್ಯಾಂಕ್ ನೀಡಿಕೆ ದರ) ಶೇ. $\frac{1}{8}$-$\frac{1}{4}$ ರಷ್ಟು ಅಧಿಕವಾಗಿರುತ್ತದೆ. ಆದರೆ ಈ ಬಾರಿ ಭಾರತೀಯ ಸ್ಟೇಟ್ ಬ್ಯಾಂಕ್ ಬಹಳ ಕಡಿಮೆ ಬಡ್ಡಿ ದರದಲ್ಲಿ—ಎಂದರೆ ಲಿಬಾರ್‌ಗಿಂತ ಶೇ. $\frac{1}{16}$ ರಷ್ಟು ಮಾತ್ರ ಹೆಚ್ಚಿನ ದರದಲ್ಲಿ—ಹಣ ಪಡೆದಿದೆ. ಇದಕ್ಕೂ ಮುಂಚೆ ಬೇರೆ ಯಾವುದೇ ಭಾರತೀಯ ಬ್ಯಾಂಕಾಗಲಿ, ಅನ್ಯ ದೇಶದ ಯಾವುದೇ ಬ್ಯಾಂಕಾಗಲಿ ಇದಕ್ಕೂ ಕಡಿಮೆಯ ದರದಲ್ಲಿ ಚರ ದರ ಠೇವಣಿ ಪತ್ರಗಳನ್ನು ಬಿಡುಗಡೆ ಮಾಡಲು ಸಾಧ್ಯವಾಗಿರಲಿಲ್ಲ.

ಈ ಪದ್ಧತಿಯು ಸೌಲಭ್ಯ ಬ್ಯಾಂಕುಗಳಿಗೆ ಮಾತ್ರ ಸೀಮಿತವಾಗಿದೆ. ಭಾರತೀಯ ಬ್ಯಾಂಕುಗಳಾದ ಭಾರತೀಯ ಸ್ಟೇಟ್ ಬ್ಯಾಂಕ್, ಬ್ಯಾಂಕ್ ಆಫ್ ಬರೋಡ ಇವು ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಉಂಟಾಗುವ ಹಣದ ಆವಶ್ಯಕತೆಗಾಗಿ, ತಮ್ಮ ಸಂಪನ್ಮೂಲಾಭಿವೃದ್ಧಿಗಾಗಿ ಈ ಸೌಲಭ್ಯವನ್ನು ಇದುವರೆಗೆ ಬಳಸಿಕೊಂಡಿವೆ. ಈ ಪತ್ರಗಳಲ್ಲಿ ಸಾಮಾನ್ಯವಾಗಿ ಬ್ಯಾಂಕುಗಳು, ವಿನಿಯೋಜನಾಗೃಹಗಳು ಹಾಗೂ ಬಹುರಾಷ್ಟ್ರೀಯ ನಿಗಮಗಳು ಹಣ ತೊಡಗಿಸುತ್ತವೆ. ಸೌಲಭ್ಯ ಪಡೆಯುವವರ ಉದ್ದರಿ ನಷ್ಟ ಸಂಭಾವ್ಯತೆಯ ಅಂದಾಜನ್ನೇ ಈ ವ್ಯವಸ್ಥೆ ಅವಲಂಬಿಸಿರುತ್ತದೆ. ಉದ್ದರಿ ನಷ್ಟ ಸಂಭಾವ್ಯತೆ ಕಡಿಮೆಯಾದಷ್ಟೂ ಇದರಲ್ಲಿ ಹಣ ತೊಡಗಿಸಲು ಹೆಚ್ಚು ಹೆಚ್ಚು ಬ್ಯಾಂಕುಗಳೂ ವಿನಿಯೋಜನಾಗೃಹಗಳೂ ಮುಂದೆ ಬರುತ್ತವೆ; ಕನಿಷ್ಠ ಬಡ್ಡಿ ದರದಲ್ಲಿ ಹಣ ನೀಡಲೂ ಸಿದ್ಧವಾಗಿರುತ್ತವೆ.

ಇದಕ್ಕೆ ತಗಲುವ ವೆಚ್ಚ ಶೇ. $\frac{1}{4}$ ರಿಂದ ಶೇ. $\frac{3}{4}$ ರಷ್ಟು (ಇತರ ವೆಚ್ಚಗಳನ್ನು ಬಿಟ್ಟು). ಮಧ್ಯಮ ಹಾಗೂ ಸಣ್ಣ ಬ್ಯಾಂಕುಗಳು ಕೂಡ ಇದರಲ್ಲಿ ಪಾಲ್ಗೊಳ್ಳಬಹುದು.

ಚರ ದರ ಠೇವಣಿ ಪ್ರಮಾಣ ಪತ್ರಗಳನ್ನು ಪರಿಸ್ಥಿತಿಗೆ ತಕ್ಕಂತೆ ಕೊಳ್ಳಬಹುದು ಅಥವಾ ಮಾಡಬಹುದು. ಒಂದೇ ಚಲಾರ್ಥದಲ್ಲಿ ವ್ಯವಹರಿಸಿದಾಗ ವಿನಿಮಯ ನಷ್ಟ ಸಂಭಾವ್ಯತೆ ಕಡಿಮೆಯಾಗಿರುತ್ತದೆ.



# 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ ಮುಂದುವರಿದ ಪಟ್ಟಿ)

383 ಹ. ಹರಿಶ್ಚಂದ್ರ
384 ಸ. ನ. ರವೀಂದ್ರಕಾಂತ
385 ಸಿ. ಎಸ್. ರವಿ
386 ಆರ್. ಜಿ. ಶ್ರೀಧರ್
387 ಜಿ. ಎಸ್. ಗುರುಪ್ರಸಾದ್
388 ಜಿ. ಬಿ. ಮುಂಡರಗಿ
389 ರಾಜಗೋಪಾಲ ತಲಪಾಡಿ
390 ಎಂ. ಶಶಿಧರ
391 ತ್ಯಾ. ನ. ನಾಗಾನಂದ
392 ಹೆಚ್. ಅಜ್ಜಪ್ಪ
393 ಪ್ರಕಾಶ್ ಟಿ. ನಾಯಕ
394 ಹೆಚ್. ದೇವರಾಜ್
395 ಶ್ರೀಕಂಠೇಶ್ವರ
396 ಜಿ. ಎಸ್. ಆನಂದರಾವ್
397 ಎಸ್. ಎನ್. ಸುಬ್ಬಣ್ಣ
398 ಹೆಚ್. ಆರ್. ನಾರಾಯಣ ಅಯ್ಯಂಗಾರ್
399 ವೇದವ್ಯಾಸ
400 ಟಿ. ನಾಗರಾಜ
401 ಡಿ. ವಿ. ನಾಗರಾಜ
402 ಜಿ. ಡಿ. ನಿರ್ಮಲ್ ಕುಮಾರ್
403 ಕೆ. ಆರ್. ಶ್ರೀವತ್ಸ
404 ರಾಜೇಶ್ವರಿ ಭಾರತಿ
405 ಬಲರಾಮಯ್ಯ
406 ವಿಶ್ವೇಶ್ವರಯ್ಯ
407 ಬಿ. ಬಾಲಸುಬ್ರಹ್ಮಣ್ಯ ಪ್ರಸಾದ್
408 ಬಿ. ಶಾಮಭಟ್
409 ಎಲ್. ರಾಘವೇಂದ್ರ
410 ಎನ್. ಚಂದ್ರಶೇಖರ್
411 ಕೆ. ಆರ್. ಫಣೀಶ್
412 ಚಿ. ರಾ. ಆನಂದಶಂಕರ
413 ಅಶೋಕ ವಿ. ಮಠದ
414 ಕೆ. ಎಸ್. ವಸಂತ

**ಭಾರತೀಯ ಸ್ಟೇಟ್ ಬ್ಯಾಂಕಿನ ಈ ಮುಂದಿನ ಶಾಖೆಗಳು**

415 ಶಿವಾಜಿನಗರ
416 ಉದ್ಯಾವರ
417 ಪುಣ್ಯಸ್ಥಳ
418 ಮಲ್ಪೆ
419 ಚಿಕ್ಕಮಗಳೂರು
420 ಖಜಾನೆ ಶಾಖೆ (ಉಡುಪಿ)
421 ಚೋಟಾಮಂಗಳೂರು
422 ರೆಸಿಡೆನ್ಸಿ ರಸ್ತೆ ಶಾಖೆ
423 ಬಳ್ಳಾರಿ
424 ಹಾನಗಲ್
425 ಬಿಜಾಪುರ
426 ಧಾರವಾಡ
427 ವಾಡಿ
428 ಎಸ್. ಐ. ಟಿ. ಬಡಾವಣೆ (ತುಮಕೂರು)
429 ಮಂಗಳಗಂಗೋತ್ರಿ
430 ಚನ್ನಪಟ್ಟಣ
431 ಕಾರವಾರ ಪೋರ್ಟ್ ಕಾಂಪ್ಲೆಕ್ಸ್
432 ಕೂಡಲಸಂಗಮ
433 ಕೆಂಭಾವಿ
434 ಸ್ಟೇಷನ್ ಏರಿಯಾ (ಗುಲ್ಬರ್ಗ)
435 ಕಾಕನೂರು
436 ಇಂಡಸ್ಟ್ರಿಯಲ್ ಎಸ್ಟೇಟ್ (ಬೆಳಗಾವಿ)
437 ಜಾಲೀಹಾಳ
438 ಶ್ರೀನಿವಾಸಪುರ ಶಾಖೆ (ಹಾಸನ ಜಿಲ್ಲೆ)
439 ರೋಣ ಶಾಖೆ
440 ಬಿಳಗಿ ಶಾಖೆ
441 ಮುಧೋಳ ಶಾಖೆ (ಬಿಜಾಪುರ ಜಿಲ್ಲೆ)
442 ಗ್ರ್ಯಾಜುಯೇಟ್ಸ್ ಕೋ-ಆಪರೇಟಿವ್ ಬ್ಯಾಂಕ್ ಲಿಮಿಟೆಡ್, ಮೈಸೂರು
443 ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ದೊಡ್ಡಬಳ್ಳಾಪುರ 561 203

**ಬ್ಯಾಂಕಿಂಗ್ ಪ್ರಪಂಚಕ್ಕೆ ಆಜೀವ ಚಂದಾ ರೂ. 150.00**

"ಸಮನ್ವಯ ಸಮಿತಿ"ಯ ಹೆಸರಿಗೆ ಬರೆದ ಚೆಕ್/ಡ್ರಾಫ್ಟ್ ಮೂಲಕ ಚಂದಾ ಪಾವತಿ ಮಾಡಬಹುದು.

**ಸಮನ್ವಯ ಸಮಿತಿ**

ಆಶ್ರಯ : ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

# ಬ್ಯಾಂಕಿಂಗ್ ನಿಘಂಟು

ಬ್ಯಾಂಕ್ ವ್ಯವಹಾರವನ್ನು ಕುರಿತು ಇಂಗ್ಲಿಷಿನಲ್ಲಿ ಬಳಕೆಯಲ್ಲಿರುವ ಒಂದೊಂದು ಪದಕ್ಕೂ ಕನ್ನಡದಲ್ಲಿ ಸಮಾನಪದ ಅಥವಾ ಪದಗಳು, ಅರ್ಥವಿವರಣೆ, ವ್ಯಾಖ್ಯೆ, ವ್ಯಾಖ್ಯಾನ, ಕಾನೂನು ಮತ್ತು ಆಚರಣೆಕುರಿತ ಅಂಶಗಳು—ಇವನ್ನೆಲ್ಲ ಕೊಡಲಾಗಿದೆ. ಬ್ಯಾಂಕಿಂಗ್ ವಿದ್ಯಾರ್ಥಿಗಳಿಗೆ, ವ್ಯವಹಾರ ನಿರತರಿಗೆ, ಬ್ಯಾಂಕಿಂಗಿನಲ್ಲಿ ಆಸಕ್ತರಾದವರಿಗೆ ಉಪಯುಕ್ತ ಕೈಪಿಡಿ.



ಮೊದಲ ಆವೃತ್ತಿಯ ಪ್ರತಿಗಳು ಮುಗಿದಿವೆ.
ಎರಡನೆಯ ಪರಿಷ್ಕೃತ ವಿಸ್ತೃತ ಆವೃತ್ತಿ ಸಿದ್ಧವಾಗಲಿದೆ.
ನಿಮ್ಮ ಪ್ರತಿಗಳನ್ನು ಮುಂದಾಗಿಯೇ ಕಾದಿರಿಸಿ.



ವಿವರಗಳಿಗೆ :

**ಪ್ರಧಾನ ಕಾರ್ಯದರ್ಶಿ**

## ಸಮನ್ವಯಸಮಿತಿ

**ಭಾರತೀಯ ಬ್ಯಾಂಕ್ ಕನ್ನಡ ಸಂಘಗಳು**
**ಭಾರತೀಯ ಸ್ಟೇಟ್ ಬ್ಯಾಂಕ್**
**೨೨, ಜಯಚಾಮರಾಜ ರಸ್ತೆ**
**ಬೆಂಗಳೂರು-೫೬೦ ೦೦೨**

PRINTED BY G. H. KRISHNAMURTHY, MYSORE PRINTING AND PUBLISHING HOUSE, MYSORE-1